ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ ಪ್ರಕಟಣೆ
ಸ್ವರವಚನ ಸಾಹಿತ್ಯ ಮಾಲೆ

# ಸ್ವರವಚನ ಸಂಪುಟ : ಹತ್ತು

ಸಂಪಾದಕರು
ಡಾ. ವೈ. ಸಿ. ಭಾನುಮತಿ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

SWARAVACHANA SAMPUTA: 10 - Songs of veerashaiva sharanas: Edited by Dr. Y. C. Bhanumathy, Research Assistant, Kuvempu Institute of Kannada studies, university of Mysore, Published by J.S.S. Granthamale, Mysore 570004, First Edition: 1998. pages xxii + 97 price: Rs. 35/-




ಪ್ರಥಮ ಮುದ್ರಣ 1998



ಬೆಲೆ: ರೂ. 35/-

ಮುದ್ರಕರು: ಜೆ.ಎಸ್.ಎಸ್. ಪ್ರಿಂಟಿಂಗ್ ಪ್ರೆಸ್, ಮೈಸೂರು

# ಶುಭ ಹಾರೈಕೆ

ವೀರಶೈವ ಧಾರ್ಮಿಕಪೀಠಗಳ, ವಿಶ್ವವಿದ್ಯಾಲಯಗಳ ಮತ್ತು ವಿದ್ವಾಂಸರುಗಳ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ-ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ ಎನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ, ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ 'ಸ್ವರವಚನಸಾಹಿತ್ಯ'ದ ಸಂಶೋಧನೆ-ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ.

ಡಾ. ಫ. ಗು. ಹಳಕಟ್ಟಿಯವರು ಮೊದಲುಮಾಡಿ ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ ಅದು ಬೆಳಕು ಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿಬಂದ ಈ ಪ್ರಕಾರವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನೂ ನಿರಂತರತೆಯನ್ನೂ ಎತ್ತಿ ತೋರಿಸಿದಂತಾಗುತ್ತದೆ.

ಜೊತೆಗೆ ವೀರಶೈವಕ್ಕೆ ತನ್ನದೇ ಆದ ಹಾಡುಗಬ್ಬ ಪರಂಪರೆಯೊಂದು ಇರುವುದನ್ನು ಸ್ಪಷ್ಟಪಡಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣುಮುಂದಿಟ್ಟುಕೊಂಡು ಪ್ರಸ್ತುತ ಯೋಜನೆಯನ್ನು ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯಿಂದ ಕೈಗೆತ್ತಿಕೊಂಡಿದೆ. ಈಗಾಗಲೇ ಡಾ ॥ ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸ ಗೀತಾಂಜಲಿ'ಯನ್ನು ಜೆ.ಎಸ್.ಎಸ್. ಗ್ರಂಥಮಾಲೆಯಿಂದ ಪ್ರಕಟಿಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ಪ್ರಥಮಬಾರಿಗೆ ಬೆಳಕಿಗೆ ತಂದುದಲ್ಲದೆ, ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದೆ.

ಇಂಥ ಒಂದು ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ. ಕರ್ನಾಟಕದ ಬೇರೆ ಬೇರೆ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದಿರುವುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನ ಸಾಹಿತ್ಯವನ್ನು ಮೊದಲು ಬಿಡಿಯಾದ ಸಂಪುಟಗಳ ರೂಪದಲ್ಲಿ ಪ್ರಕಟಿಸುವುದು ಎಂದು ಯೋಜಿಸಲಾಗಿದೆ. ಈ ಯೋಜನೆಯು ಫಲಪ್ರದವಾಗುವ ರೀತಿಯಲ್ಲಿ ಎಲ್ಲ ಸ್ವರವಚನಗಳು ಹಸ್ತಪ್ರತಿಗಳಿಂದ, ಜನಪದರ ಕಂಠಸ್ಥಲಗಳಿಂದ, ಸ್ಮೃತಿಪಟಲಗಳಿಂದ ಸೆರೆ ಬಿಡಿಸಿಕೊಂಡು ಬೆಳಕಿಗೆ ಬಂದ ಬಳಿಕ, ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯು ಪ್ರಕಟಿಸಿದ ಹಾಗೂ ಅನ್ಯರು ಪ್ರಕಟಿಸಿದ ಎಲ್ಲ ಸಂಪತ್ತನ್ನು ಕ್ರೋಢೀಕರಿಸಿ, ವ್ಯವಸ್ಥಿತವಾಗಿ ವರ್ಗೀಕರಿಸಿ, ಅದನ್ನು 'ಸಮಗ್ರ ಸ್ವರವಚನಸಾಹಿತ್ಯ ಪ್ರಕಟನೆ ಯೋಜನೆ' ಹೆಸರಿನಿಂದ ಸಂಪುಟ ಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲರಿಗೂ ಸಕಲಶ್ರೇಯಸ್ಸನ್ನು ಹಾರೈಸುತ್ತೇವೆ.

ಮೈಸೂರು
ಜುಲೈ 22, 1998

. ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು

# ಪೀಠಿಕೆ

ರಾಗ ತಾಳ ಅಂಕಿತಗಳಿಂದ ಕೂಡಿದ ವೀರಶೈವಹಾಡುಗಳನ್ನು ಸ್ವರವಚನ ಎಂಬ ಪರಿಭಾಷೆಯಲ್ಲಿ ಗುರುತಿಸಲಾಗಿದ್ದು ಅದು ವೀರಶೈವಸಾಹಿತ್ಯದ ಪ್ರಮುಖ ಪ್ರಕಾರವಾಗಿ ಬೆಳೆದುನಿಂತಿದೆ. ಗದಗಿನ ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ ಮತ್ತು ಮೈಸೂರಿನ ಶ್ರೀ ಸುತ್ತೂರು ಮಠದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ - ಇವರ ಪ್ರಯತ್ನದಿಂದಾಗಿ ಸ್ವರವಚನ ಸಾಹಿತ್ಯದ ಆಳ-ಅಗಲ, ವಿಸ್ತಾರ- ವೈವಿಧ್ಯಗಳು ದೃಗ್ಗೋಚರವಾಗಿವೆ.

ಕತ್ತಲಲ್ಲಿರುವ ಸ್ವರವಚನಗಳೆಲ್ಲ ಬೆಳಕಿಗೆ ಬರಬೇಕು, ಅಪ್ರಕಟಿತ ಸ್ವರವಚನಗಳನ್ನು ಶೋಧಿಸಿ ಹೊರತೆಗೆಯುವ ಕಾರ್ಯ ಜರೂರಾಗಿ ಆಗಬೇಕು ಎಂಬ ಧ್ಯೇಯದಿಂದ ಪ್ರಸ್ತುತಗ್ರಂಥ ಪ್ರಕಟವಾಗುತ್ತಿದೆ. ಇದೊಂದು ಸಮ್ಮಿಶ್ರ ಸಂಪುಟ. ಇಲ್ಲಿ ಸುಮಾರು ೪೦ ಸ್ವರವಚನಕಾರರ ೧೧೦ ಹಾಡುಗಳಿವೆ. ಅನುಬಂಧದಲ್ಲಿ ೩ ಹಾಡುಗಳಿವೆ. ಈ ಹಾಡುಗಳನ್ನು ಸ್ವರಪದಗಳು, ಉದಯರಾಗ, ಸೋಬಾನ, ಉಯ್ಯಾಲೆ ಪದ, ಆರತಿಪದ ಎಂದು ಸ್ಥೂಲವಾಗಿ ವಿಂಗಡಿಸಬಹುದು. ಇಲ್ಲಿನ ವಸ್ತು ಪ್ರಧಾನವಾಗಿ ವೀರಶೈವಯೋಗ, ಶಿವಪಾರಮ್ಯ, ಶಿವಸ್ತುತಿ. ತೀರ ಕ್ವಚಿತ್ತಾಗಿ ನೀತಿ ಹಾಗೂ ಸಮಕಾಲೀನ ಸಂಗತಿಗಳಿವೆ. ಈ ಸಂಪುಟದ ಹಾಡುಗಳೆಲ್ಲವೂ ಇದೇ ಮೊದಲ ಬಾರಿ ಪ್ರಕಟವಾಗುತ್ತಿರುವುದರಿಂದ ಇಲ್ಲಿನ ಬಹಳಷ್ಟು ಹಾಡುಗಳ ಕರ್ತೃ ಕಾಲವಿಚಾರಗಳು ಅವಿದಿತವಾಗಿವೆ. ಈ ಸಂಬಂಧವಾಗಿ ಆಂತರಿಕ ಅಥವಾ ಬಾಹ್ಯ ಸಾಕ್ಷಿಗಳೂ ಅಲಭ್ಯವಾಗಿವೆ.

ಪಠ್ಯಕ್ಕೆ ಸೇರಿದಂತೆ ಆರಂಭದ ಆರು ಹಾಡುಗಳ ಅಂಕಿತ 'ಗುರುವೃಷಭ'. ಈತನ ಬಗೆಗೆ ಯಾವ ಮಾಹಿತಿಯೂ ಸದ್ಯದಲ್ಲಿ ಸಿಕ್ಕಿಲ್ಲ. ಗದಗಿನ ಶ್ರೀಮಠದ ಪ್ರಕಟಣೆ ಸ್ವರವಚನವಾಹಿನಿ ಸಂಪುಟ ಒಂದರಲ್ಲಿ 'ಗುರುಸಿದ್ಧ ವೃಷಭ' ಎಂಬ ಅಂಕಿತ ಕಂಡುಬರುತ್ತದೆ. ಈ ತೆರನ ಕಿಂಚಿತ್ ಅಂಕಿತಸಾಮ್ಯದಿಂದ ಇವರಿಬ್ಬರೂ ಏಕವ್ಯಕ್ತಿಗಳೆಂದು ಹೇಳಲಾಗುವುದಿಲ್ಲ. ಪ್ರಸ್ತುತ ಗುರುವೃಷಭ ಅಂಕಿತದ ಹಾಡುಗಳ ವಸ್ತು ಮುಖ್ಯವಾಗಿ ವೀರಶೈವಯೋಗಕ್ಕೆ ಸಂಬಂಧಿಸಿವೆ. ಆದರೆ ನಾಲ್ಕನೆಯ ಹಾಡಿನಲ್ಲಿ 'ಪಶುವಿಗೆ ಲಿಂಗಮುದ್ರೆಯ ಒತ್ತಿದೊಡದು ವೃಷಭನಾಗುವುದೆ' ಎಂಬ ಮಾತು ಬಸವಣ್ಣನವರು ತಮ್ಮ ವಚನದಲ್ಲಿ 'ಉಂಡಲಿಗೆಯ ಪಶುವಾದೆನಯ್ಯ' ಎಂದಿರುವುದನ್ನು ನೆನಪಿಗೆ ತರುತ್ತದೆ. ಇದು ಗೂಳಿಗಳಿಗೆ ಲಿಂಗಮುದ್ರೆ ಹಾಕುತ್ತಿದ್ದ ಸಂಪ್ರದಾಯದ ಮೇಲೂ ಬೆಳಕು ಚೆಲ್ಲುತ್ತದೆ. 'ಬೆಳಗುತಿದೆ ವಸ್ತು ಬೆಳಗುತಿದೆ' ಎಂಬ ಉಕ್ತಿ ಈತನ ಹಾಡಿನಲ್ಲಿ ಕಂಡುಬರುವುದರಿಂದ ಇದು ಸಾಧಕಸ್ಥಿತಿಯ ಅಭಿವ್ಯಕ್ತಿಯಾಗದ ಅನುಭಾವಸ್ತರದ ರಚನೆಯಾಗಿ ತೋರುತ್ತದೆ. ಈ ಹಾಡು ನಿಜಗುಣರ 'ಜ್ಯೋತಿ ಬೆಳಗುತಿದೆ' ಎಂಬ ಹಾಡನ್ನು ಹೋಲುತ್ತದೆ. 'ಗುರುಸಿದ್ಧ ವೃಷಭ' ಎಂಬ ಅಂಕಿತದ ಹಾಡಿನಲ್ಲಿಯೂ 'ಬೆಳಗುತಿದೆ ಜ್ಯೋತಿ ನೋಡಮ್ಮ' ಎಂಬ ಉಲ್ಲೇಖವಿದ್ದು ಇವೆರಡೂ ಒಂದೆ ಮಾನಸಿಕಸ್ತರದಿಂದ ಮೂಡಿದವಾಗಿರಬೇಕು.

ಶಾಂತಯ್ಯ ರಚಿಸಿದ ಹನ್ನೊಂದು ಹಾಡುಗಳು ಮೊದಲ ಬಾರಿಗೆ ಈ ಸಂಪುಟದಲ್ಲಿ ಸೇರ್ಪಡೆಯಾಗಿವೆ. ಈತನ ಅಂಕಿತ ಶಾಂತವೀರೇಶ, ಶಾಂತವೀರೇಶ್ವರ, ಗುರುಶಾಂತವೀರೇಶ. ಈ ಅಂಕಿತಗಳ ಕೆಲವು ಹಾಡುಗಳು ಎಸ್. ಶಿವಣ್ಣ ಅವರ ಸ್ವರವಚನ ಸಂಪುಟಗಳ ಪರಿಷ್ಕರಣದಲ್ಲಿ ಮತ್ತು ಉಮಾಪತಿ ಅವರು ಸಂಪಾದಿಸಿಧ ಸ್ವರವಚನವಾಹಿನಿಯಲ್ಲಿ ಪ್ರಕಟವಾಗಿವೆ. ಹಾಗಾಗಿ ಶಾಂತಯ್ಯ ಇನ್ನೂ ಹೆಚ್ಚಿನ ಹಾಡುಗಳನ್ನು ಬರೆದಿರುವ ಸಾಧ್ಯತೆ ಇದೆ. ಈತನ ವೈಯಕ್ತಿಕ ವಿಚಾರ ಈವರೆಗೆ ಅಲಭ್ಯವಾಗಿತ್ತು. ಆದರೆ ಈ ಸಂಪುಟದ ೧೭ನೆಯ ಹಾಡಿನ 'ಸೋಸಲೆಯ ದಯಾಪರ ಕೆಂಪನಂಜೇಶನೊಡನೆ ಸಲ್ಲಾಪದಿಂ ಶಾಂತಯ್ಯ ಪೇಳ್ದನಾಲಿಪುದು' (೧೭-೫) ಎಂಬ ಉಲ್ಲೇಖದಿಂದ ಇವು ಶಾಂತಯ್ಯನ ರಚನೆಗಳೆಂದೂ ಈತ ಸೋಸಲೆಯ ಭಾಗದವನಿರಬೇಕೆಂದೂ ಸ್ಪಷ್ಟವಾಗುತ್ತದೆ. ಈತ ಹೇಳುವ ಕೆಂಪನಂಜೇಶ ಯಾರು? ಕೆಂಪ ಎಂಬ ವಿಶೇಷಣದ ಮಹತ್ವವೇನು? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಸ್ವರವಚನ ಸಂಪುಟ ಮೂರರಲ್ಲಿ ಬರುವ ಕರಿಬಸವೇಶ್ವರ ವಚನದ ಒಂದು ಹಾಡಿನಲ್ಲಿ ಒಬ್ಬ ಕೆಂಪನಂಚೇಶನ ಉಲ್ಲೇಖವಿದೆ-

ಕೆಂಪನಂಚೇಶನು ಕೆಂಪಮಲ್ಲೇಶನು
ಕೆಂಪಸೋಮೇಶನ ಕೂಡಿ
ಕೆಂಪಗಂಗಾಧರ ಕೆಂಪಬಸವರಾಜ
ಕೆಂಪವೀರೇಶ ವಸವಂತ*

ಕರಿಬಸವೇಶ್ವರನ ಅಂಕಿತ ಶಾಂತವೀರೇಶ್ವರ. ಇದು ಈತನ ಗುರುವಿನ ನಾಮ ಧೇಯವೂ ಆಗಿರಬಹುದು. ಮುಂದೆ ಈ ಗುರು ಮುರಿಗಾಸಿಂಹಾಸನವನ್ನು ಏರಿರಬಹುದು. ಇಮ್ಮಡಿ ಗುರುಸಿದ್ಧರ ಕಾಲದಲ್ಲಿ ೧೬ ಸಮಯಗಳಿದ್ದವು. ಇವುಗಳಲ್ಲಿ ಕೆಲವು ಗುರುಸಿದ್ಧರ ಪಟ್ಟವನ್ನು ವಿರೋಧಿಸಿರಬಹುದು. ಆ ಹದಿನಾರು ಸಮಯಗಳಲ್ಲಿ ಕೆಂಪಿನ ಸಮಯವೂ ಒಂದು. ಇಲ್ಲಿ ಬರುವ ಕೆಂಪಿನ ವಿಶೇಷಣದಿಂದ ಆ ಗುರುವರ್ಗ ಕೆಂಪು ಬಣ್ಣದ ವಸ್ತ್ರಧಾರಿಗಳಾಗಿರಬಹುದು. ಅಥವಾ ಕೆಂಪಿನ ಸಮಾಜಕ್ಕೆ ಸೇರಿದವರಾಗಿರಬಹುದು. ಕವಿ ಮೈಸೂರು ಜಿಲ್ಲೆಯವನಾಗಿದ್ದುದರಿಂದ ನಂಜನಗೂಡು ಗುಂಡಲುಪೇಟೆ ಭಾಗದ ಕೌಂಡಲಿ (ಕೌಂಡಿನ್ಯ) ಹೆಗ್ಗಡದೇವನಕೋಟೆಯ ಭೃಗು (ನುಗು) ನದಿಗಳನ್ನು ಹೆಸರಿಸಿದ್ದಾನೆ.

ಭಗವಂತನ ಸ್ವರೂಪವನ್ನು ಕಾಣಬೇಕೆಂಬುದು ಪ್ರತಿಯೊಬ್ಬ ಭಕ್ತನ ಗುರಿ. ಶಾಂತಯ್ಯನ ಹಾಡುಗಳಲ್ಲಿ ಭಗವಂತನನ್ನು ಕಾಣುವ ಭಕ್ತನ ಕಾತುರ ಸುವ್ಯಕ್ತ. ಶಿವಪಾರ್ವತಿಯರನ್ನು ಭಕ್ತಿಯಿಂದ ಸ್ತುತಿಸುವ ಈ ಕವಿ ಜೊತೆಯಲ್ಲಿಯೇ ಕೆಲವೊಂದು ನೀತಿಮಾತುಗಳನ್ನು ನುಡಿದಿದ್ದಾನೆ.

ಕೂಡದಿರು ಖುಲ್ಲಮಾನವರ ನೀನು
ಬೇಡದಿರು ದೈನ್ಯದಿಂ ಪರರ
ಹಾಡದಿರು ಹರನಲ್ಲದವರ ಸಡ್ಡೆ
ಮಾಡದಿರು ಸಟೆಯನಾಡುವರ

ವೀರಶೈವದ ಅಂಗವಾದ ಶರಣಸತಿ-ಲಿಂಗಪತಿ ಭಾವವು ವಚನಗಳಲ್ಲಿ ವ್ಯಕ್ತವಾದಂತೆ ಸ್ವರವಚನಗಳಲ್ಲಿಯೂ ನಿಚ್ಚಳವಾಗಿದೆ. ಕವಿ ತಾನೇ ಸತಿಸ್ಥಾನದಲ್ಲಿ ನಿಂತು ಭಗವಂತನನ್ನು

ಪತಿಯಾಗಿ ಕಲ್ಪಿಸಿಕೊಂಡಿದ್ದಾನೆ. ಆದರೆ ಈ ಭಾವವನ್ನು ಹೊರತುಪಡಿಸಿದ ಸ್ವರವಚನಗಳಲ್ಲಿನ ಸ್ತ್ರೀಯರನ್ನು ನೋಡಿದಾಗ ಈತನಲ್ಲಿ ಸ್ತ್ರೀಯರ ಬಗೆಗೆ ಆ ಕಾಲದ ಸಾಂಪ್ರದಾಯಿಕ ದೃಷ್ಟಿಯೇ ಕಂಡುಬರುತ್ತದೆ (೧೩). ವೈರಾಗ್ಯದ ಮೆಟ್ಟಿಲಾದ ಸ್ತ್ರೀಗರ್ಹಣೆ ಕೆಲವು ಕಡೆ (೧೪) ಪರಾಕಾಷ್ಠೆ ತಲಪಿದೆ. ಆಧ್ಯಾತ್ಮದೆಡೆಗೆ ತುಡಿಯುತ್ತಿದ್ದ ಈತನ ಮನಸ್ಸು ಸಂಸಾರಕ್ಕೆ ವಿಮುಖವಾಗಿ 'ಇಲ್ಲಿ ಭಂಗಪಟ್ಟಿದ್ದು ಸಾಕು ಬೇಗ ನನ್ನನ್ನು ನಿನ್ನವನೆಂದು ತಿಳಿದು ಅಪ್ಪಿಕೋ' (೧೫) ಎಂದು ಮೊರೆಯಿಡುತ್ತದೆ.

ಶಾಂತಯ್ಯನ ಸ್ವರವಚನವೊಂದು (೧೭) ತುಂಬ ವಿಶಿಷ್ಟವಾಗಿದ್ದು ಅದು ತನ್ನ ಕಾಲದಲ್ಲಿ ಬಂದ ಭೀಕರ ಚಂಡಮಾರುತ, ಅದರಿಂದ ಉಂಟಾದ ಪ್ರಾಣಹಾನಿ ಇತ್ಯಾದಿ ವಿಚಾರವನ್ನು ದಾಖಲಿಸುತ್ತದೆ. ಕವಿ ಶಾಂತಯ್ಯ ತಾನು ನೆಲೆನಿಂತ ಸ್ಥಳದಲ್ಲಿ ಹುಯ್ದ ಭಾರೀಮಳೆಯನ್ನು ವರ್ಣಿಸಿದ್ದಾನೆ. 'ಸ್ವಾತಿಯ ಮಳೆ ಹುಯ್ದ ಸೋಜಿಗವನು ಕೇಳು' ಎನ್ನುವ. ಹಾಡಿನ ಆರಂಭವೆ ಓದುಗರ ಕುತೂಹಲವನ್ನು ಕೆರಳಿಸುತ್ತದೆ. ಮುಂದಿನ ವಿವರಗಳೂ ನೈಜವಾಗಿವೆ. ಹಗಲೇ ಕತ್ತಲೆ ಮೂಡಿದಂತೆ ದಟ್ಟ ಮೋಡ ಮುಸುಕುತ್ತದೆ. ಚಂಡಮಾರುತ ಬೆಟ್ಟವನ್ನೇ ಕೀಳುತ್ತದೆ. ಕಾಡಿನ ಮೃಗಗಳೆಲ್ಲ ಕಂಗೆಡುತ್ತವೆ. ಕಾಡುಹಂದಿ, ಜಿಂಕೆ, ಕಾಡುಕೋಣ, ಕರಡಿ, ಹುಲಿ, ಆನೆ, ಕುಕ್ಕರ, ಮೊಲ ಮೊದಲಾದ ಪ್ರಾಣಿಗಳು ಹಕ್ಕಿಪಕ್ಷಿಗಳು ಮನುಷ್ಯರು ಪ್ರವಾಹದಲ್ಲಿ ಸಿಕ್ಕಿ ಪ್ರಾಣಬಿಡುತ್ತಾರೆ. ಅನೇಕರು ಊರು ಬಿಡುತ್ತಾರೆ. ಬತ್ತ, ರಾಗಿ, ಗೋಧಿಯ ಮದೆಗಳು ತೇಲಿ ಹೋಗುತ್ತವೆ. ಜನರು ಉಣ್ಣಲು ಧಾನ್ಯವಿಲ್ಲದೆ ಅನಾಥರಾಗುತ್ತಾರೆ. ಹೀಗೆ ಕವಿ ಪ್ರಾಕೃತಿಕ ವಿಕೋಪವನ್ನು ಮಾನವೀಯ ನೆಲೆಯಿಂದ ವರ್ಣಿಸಿ ಸ್ವರವಚನದ ವಸ್ತುವೈವಿಧ್ಯತೆಗೆ ಕಾರಣನಾಗಿದ್ದಾನೆ.

ತೋಂಟದ ಸಿದ್ಧಲಿಂಗ ಯತಿಯನ್ನು ತೋಂಟದ ಲಿಂಗ, ತೋಂಟದಾರ್ಯ, ತೋಂಟದ ದೇಶಿಕ, ಸಿದ್ಧ, ಸಿದ್ಧಲಿಂಗ, ಸಿದ್ಧೇಶ್ವರ, ಸಿದ್ಧಲಿಂಗಯತಿ ಎಂದೆಲ್ಲ ಕರೆಯುವುದುಂಟು. ತೋಂಟದ ಸಿದ್ಧಲಿಂಗ ಅಂಕಿತದ ಒಂದು ಹಾಡು (೧೮) ಪ್ರಸ್ತುತ ಸಂಪುಟದಲ್ಲಿದೆ. ಈ ಅಂಕಿತದ ಕರ್ತೃ ಸಿದ್ಧವೀರದೇವ ಎಂಬುದು ಎಲ್. ಬಸವರಾಜು ಅವರ ಅಭಿಪ್ರಾಯ. ಈತ ಗೂಳೂರುಸಿದ್ಧವೀರಣ್ಣೊಡೆಯ ಇರಬಹುದೆ? ಏಕೆಂದರೆ ತೋಂಟದ ಸಿದ್ಧಲಿಂಗನ ಶಿಷ್ಯ ಬೋಳಬಸವ. ಈತನ ಶಿಷ್ಯ ಗೂಳೂರು ಸಿದ್ಧವೀರೇಶ. ಈತ ತೋಂಟದ ಸಿದ್ಧಲಿಂಗ ಯತಿಗಳ ಪರಂಪರೆಯಲ್ಲಿ ಬಂದವನಾದ್ದರಿಂದ ಆ ಅಂಕಿತ ಹೊಂದಿರುವ ಸಾಧ್ಯತೆ ಇದೆ. ಈತನ ಹಾಡಿನಲ್ಲಿ ಗುರು ಲಿಂಗ ಜಂಗಮದ ಧ್ಯಾನಕ್ಕೆ ಒತ್ತು ನೀಡಲಾಗಿದೆ. ಸಿದ್ಧಲಿಂಗೇಶ್ವರ ಅಂಕಿತದ ಹಾಡಿನಲ್ಲಿ (೧೯) ಹೆಣ್ಣಿನ ಮೋಹಕ್ಕೆ ಸಿಲುಕಬಾರದೆಂಬ ಎಚ್ಚರಿಕೆಯ ನುಡಿಗಳಿವೆ. ಮಹಾಲಿಂಗ ಗುರು ಸಿದ್ಧೇಶ್ವರ ಪ್ರಭುವೆ ಎಂಬುದು ತೋಂಟದ ಸಿದ್ಧಲಿಂಗಯತಿಯ ಅಂಕಿತ. ಆದರೆ ವೀರಶೈವಯೋಗ ವಿಚಾರವನ್ನು ಬಿತ್ತರಿಸುವ ಈ ಸಂಪುಟದ 'ಸಿದ್ಧಪ್ರಭುವೆ' ಅಂಕಿತ (೨೦) ಈತನದೆಂದು ಹೇಳಲು ಆಧಾರಗಳಿಲ್ಲವಾಗಿವೆ. ಸಿದ್ಧಲಿಂಗ ಅಂಕಿತದ ಹಾಡಿನಲ್ಲಿ (೨೧) ರೇವಣಸಿದ್ಧನ ಸ್ತುತಿಯ ಜೊತೆಗೆ ಸಿದ್ಧಲಿಂಗನನ್ನೂ ಸ್ತುತಿಸಲಾಗಿದೆ. ತೋಂಟದ ವೀರ ಅಂಕಿತದ ಹಾಡಿನಲ್ಲಿ (೨೨) ಕವಿ 'ನಂಬಬೇಡ ಮನುಜದೇಹ' ಎನ್ನುತ್ತ ಇಷ್ಟಲಿಂಗದಲ್ಲಿ ದೃಷ್ಟಿಯಿಡಲು ಬೋಧಿಸುತ್ತಲೇ ಜೀವಿಯ ಜನನ ಕಾಲದ ಸ್ಥಿತಿಯನ್ನು

ವರ್ಣಿಸುವುದುಂಟು. ತೋಂಟದದೇಶಿಕ ಅಂಕಿತದ ಹಾಡಿನಲ್ಲಿ (೨೩) ಲಿಂಗದ ಪ್ರಭೆಯನ್ನು ವೀರಶೈವಯೋಗದ ನೆಲೆಯಿಂದ ವಿವರಿಸಿದ್ದರೆ ಘನಶಾಂತಫಕೀರ ಅಂಕಿತದ ಹಾಡು (೨೪) ಕೇವಲ ಬಾಹ್ಯಪೂಜೆಯಲ್ಲಿ ತೊಡಗಿರುವ ಪಾಮರನಿಗೆ ಜ್ಯೋತಿಯು ಕಾಣಿಸ ಲಾರದೆಂಬುದನ್ನು ತಿಳಿಸುತ್ತದೆ. ಇಲ್ಲಿನ ಫಕೀರ ಎಂಬ ಶಬ್ದ ಈ ಸ್ವರವಚನಕಾರ ಇತ್ತೀಚಿನ ವನೆಂಬುದನ್ನು ಸೂಚಿಸುತ್ತದೆ.

ಶಿವನ ಒಲುಮೆ ಗಳಿಸಲು ಭಕ್ತರು ಅನುಸರಿಸುವ ಅನೇಕ ಮಾರ್ಗಗಳಲ್ಲಿ ಭಜನೆಯೂ ಒಂದು. 'ನೀನ್ಯಾಕೊ ನಿನ್ನ ಹಂಗ್ಯಾಕೊ ನಿನ್ನ ನಾಮದ ಬಲವೊಂದಿದ್ದರೆ ಸಾಕೊ' ಎಂದು ದಾಸರು ಹೇಳುವಂತೆ ಸ್ವರವಚನಕಾರರೂ ಕೂಡ-

ಬಾರಿಬಾರಿಗೆ ಹರನೆಂಬುವ ಮನುಜರ
ಘೋರ ದುರಿತ ಪರಿಹರಿಸುವನ। ಭಜನೆಯ ಮಾಡಬಾರದೆ (೨೫)

ಎಂದು ಪ್ರತಿಕ್ಷಣವೂ ಶಿವನನ್ನು ಭಜಿಸುವಂತೆ ಕರೆ ನೀಡುತ್ತಾರೆ. ಕರಿವೃಷಭೇಂದ್ರ ಅಂಕಿತದ ಕೆಲವು ಹಾಡುಗಳು ಈ ಸಂಪುಟದಲ್ಲಿ ಎಡೆಪಡೆದಿವೆ. ಈ ಕರಿವೃಷಭೇಂದ್ರ ಯಾರು? ಕರಿವೃಷಭೇಂದ್ರ ಹೆಸರಿನವರು ಅನೇಕರಿದ್ದಾರೆ. ಸೋಮೇಕಟ್ಟೆ ಕರಿವೃಷಭೇಂದ್ರ ಎಂಬ ಸ್ವರವಚಕಾರನಿದ್ದು ಈತ ಪ್ರಸ್ತುತ ಕವಿಯ ಗುರುವಾಗಿರಬಹುದು. ಈ ಊಹೆ ನಿಜವಾದರೆ ಕರಿವೃಷಭೇಂದ್ರ ಅಂಕಿತದ ಈ ಹಾಡುಗಳು ಕ್ರಿ.ಶ. ೧೮೮೦ರ ಸುಮಾರಿನಲ್ಲಿ ರಚಿತವಾಗಿರ ಬೇಕು. ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ನೊಣವಿನಕೆರೆ ಎಂಬ ಗ್ರಾಮದಲ್ಲಿ ಸೋಮೇಕಟ್ಟೆ ಎಂಬ ವಿರಕ್ತ ಮಠವಿದೆ. 'ಆ ಮಠದಲ್ಲಿ ಈಗ್ಗೆ ಸುಮಾರು ೬೦-೭೦ ವರ್ಷಗಳ ಹಿಂದೆ ಕರಿವೃಷಭೇಂದ್ರರೆಂಬ ಸ್ವಾಮಿಗಳು ಪೂರ್ಣಶಿವಾನುಭಾವಿಗಳಿದ್ದು ಅನೇಕ ಭಕ್ತರುಗಳನ್ನು ಅವರು ತಮ್ಮ ಉಪದೇಶಾಮೃತದಿಂದ ಪುನೀತರನ್ನಾಗಿ ಮಾಡಿ ಶಿವೈಕ್ಯರಾದರು.' ಇವರು ಹಾಡಿದ ಪದಗಳನ್ನು ಹೆಚ್.ಆರ್. ಮಹಂತಿನ್ ಅವರು ೧೯೩೩ ರಲ್ಲಿ ಸಂಗ್ರಹಿಸಿದ ಸಂಗತಿ ತಿಳಿದು ಬರುತ್ತದೆ. ಪ್ರಸ್ತುತ ಸಂಕಲನದ ಈ ಅಂಕಿತದ 'ತಂಗಿ, ಹೋಗೋಣ ಬಾರಮ್ಮ ತಯ್ಯಾರಾಗಮ್ಮ' ಎಂದು ಹೇಳುವ ಹಾಡು ಅನುಭಾವವನ್ನು ಸಾಧಿಸಿದ ಜೀವಿಯ ಅಭಿವ್ಯಕ್ತಿಯಾಗಿದೆ. ಇದೇ ಹಾಡಿನಲ್ಲಿ ಸ್ತ್ರೀಯರ ಕೆಲವು ಆಭರಣಗಳನ್ನು ಮೈಗೆ ಪೂಸುವ ಗಂಧ ಕಸ್ತೂರಿಗಳನ್ನು ಹೆಸರಿಸಲಾಗಿದೆ. ಹೀಗೆ ಸ್ವರವಚನಗಳು ಬಾಹ್ಯದಲ್ಲಿ ಲೌಕಿಕವಿಚಾರಗಳನ್ನು ನಿರೂಪಿಸುವಂತೆ ಕಂಡುಬಂದರೂ ಆಂತರಿಕವಾಗಿ ಆಧ್ಯಾತ್ಮವನ್ನು ಹುದುಗಿಸಿಕೊಂಡಿರುತ್ತವೆ.

'ರಾಚೋಟಿಪ್ರಭು'ದೇವನನ್ನು ಸಂಭೋಧಿಸುವ ಹಾಡಿನ (೨೭) ಕರ್ತೃ ತಿಳಿಯದಿದ್ದರೂ ಅಂತ್ಯದ ಉಲ್ಲೇಖಗಳಿಂದ ಈತ ಶಿವಗಂಗೆಯ ಸುತ್ತಿನಲ್ಲಿದ್ದನೆಂದೂ ರುದ್ರಮುನಿಯ ಶಿಷ್ಯನೆಂದೂ ಊಹಿಸಬಹುದು. ಇಲ್ಲಿ ಕವಿ ತಾನೇ ಸತಿಯಾಗಿ ರಾಚೋಟಿಪ್ರಭುವನ್ನೇ ಪತಿಯಾಗಿ ಕಲ್ಪಿಸಿಕೊಂಡಿದ್ದಾನೆ.

ಶರೀರವು ಶಾಶ್ವತವಲ್ಲ, ನೀರ ಮೇಲಣ ಗುಳ್ಳೆ ಎಂದು ವರ್ಣಿಸುವುದುಂಟು. ಇದೇ ಇಂಗಿತ ೨೮ನೆಯ ಹಾಡಿನಲ್ಲಿದೆ. ಮನುಷ್ಯ ಸಂಸಾರದಲ್ಲಿ ಸಿಲುಕಿ ಮದ ಕಾಮಬಾಧೆಗಳಿಗೆ ತುತ್ತಾಗುತ್ತಾನೆ. ಬಾಲ್ಯ ಯೌವನ ಕೌಮಾರ್ಯ ಮುಪ್ಪುಹೀಗೆ ಒಂದೊಂದು ಮಜಲಿನಲ್ಲಿಯೂ

ಒಂದೊಂದು ಸಮಸ್ಯೆ ಆತನಿಗೆ ಎದುರಾಗುತ್ತದೆ. ಆದುದರಿಂದ ಗುರುಸೇವೆ ಮಾಡುವ ಮೂಲಕ ಮಾನವ ಶಿವನಾಗಬಲ್ಲನೆಂಬುದನ್ನು ಈ ಹಾಡು ಅರುಹುತ್ತದೆ.

ಹರಿದಾಸರಲ್ಲಿ ಕೃಷ್ಣನಿಗೆ ಹೇಗೆ ಒಲಿದೆ ಎಂದು ರುಕ್ಮಿಣಿಯನ್ನು ಕೇಳುವಂತೆ ಸ್ವರವಚನಗಳಲ್ಲಿಯೂ ಪಾರ್ವತಿಯನ್ನು ಹುಲಿತೊಗಲುಡಿಗೆ, ತಲೆಗಳ ಸರಮಾಲೆ, ಜಡೆಮುಡಿಗಟ್ಟಿದ ಶಿವನಿಗೆ ಹೇಗೆ ಒಲಿದೆ ಎಂದು ಕೇಳುತ್ತಲೇ ಆತನಿಗೆ ಸಂಬಂಧಿಸಿದ ಪಂಚ ವಿಂಶತಿಯ ಲೀಲೆಗಳಲ್ಲಿ ಕೆಲವನ್ನು, ಶರಣರಪ್ರಸಂಗಗಳನ್ನು ಹೇಳಲಾಗಿದೆ. ಭಕ್ತನೊಬ್ಬನಿಗೆ ಶಿವನು ಒಲಿದದ್ದು ಮತ್ತೊಂದು ಹಾಡಿನಲ್ಲಿ ವ್ಯಕ್ತವಾಗಿದೆ.

ಶ್ರೀ ಗುರುವೀರ ಅಂಕಿತದ ಹಾಡಿನಲ್ಲಿ (೩೧) ಮಾತಿಗೂ ಕೃತಿಗೂ ಅಂತರವಿಟ್ಟು ನಡೆದುಕೊಳ್ಳುವುದನ್ನು ಹಲವು ದೃಷ್ಟಾಂತಗಳೊಡನೆ ಚೆಲುವಾಗಿ ವರ್ಣಿಸಲಾಗಿದೆ.

ಬದುಕು ಸಾರ್ಥಕವಾಗಬೇಕೆಂಬ ಹಂಬಲ ಮಾನವನಿಗೆ ಸಹಜವಾದುದು. ಆದರೆ ಅದರ ಹಾದಿ ಬಹಳ ಕಠಿಣವಾದುದು. ಮುಕ್ತಿ ಪಡೆಯಬೇಕೆಂಬ ಆಶಯ ಹೊತ್ತ ಭಕ್ತನನ್ನು ವ್ಯರ್ಥವಾಗಿ ಹೋಗುತ್ತದಲ್ಲ ಮಾನವಜನ್ಮ ಎಂದು ಸ್ವರವಚನವೊಂದು (೩೨) ಎಚ್ಚರಿಸುತ್ತದೆ. ಬದುಕೆಲ್ಲ ತಂದೆ ತಾಯಿ ಅತ್ತೆ ಮಾವ ಮೊದಲಾದವರಿಗೆ ದುಡಿದು ಹಾಕುವುದರಲ್ಲಿಯೆ ಕಳೆದುಹೋಗುತ್ತದೆ. ನೀತಿಶಾಸ್ತ್ರ ತಿಳಿಯದೆ ಚಾಪಲ್ಯ ಕಡಿಮೆಯಾಗುವುದಿಲ್ಲ. ಭವದ ಬೇರು ಕತ್ತರಿಸದೆ ಮುಕ್ತಿ ದೊರೆಯುವುದಿಲ್ಲವೆಂಬುದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

ಚೀಲಾಳೇಶ ಅಂಕಿತದ ಎರಡು ಹಾಡುಗಳು (೩೩, ೩೪) ಈ ಸಂಪುಟದಲ್ಲಿವೆ. ಈ ಅಂಕಿತದ ಕರ್ತೃ ತಿಳಿಯದು. ಈತ ಚೀಲಾಳಬಗೆಯ ಸ್ಥಾಪಕ ಚೀಲಾಳಪ್ಪನ (ಕ್ರಿ.ಶ. ೧೭೨೦) ಶಿಷ್ಯಪರಂಪರಗೆ ಸೇರಿದವನಿರಬೇಕೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈತನ ಎರಡು ಹಾಡುಗಳೂ ಮಧುರಭಕ್ತಿಯನ್ನು ನಿರೂಪಿಸುತ್ತವೆ. ಇವು ಕ್ರಿ.ಶ. ೧೮೦೦ರ ರಚನೆಯಾಗಿರಬೇಕು.

ಭಗವಂತ ಎಲ್ಲೆಲ್ಲಿಯೂ ಇದ್ದಾನೆ, ಸರ್ವಾಂತರ್ಯಾಮಿ ಎಂಬ ಕಲ್ಪನೆಗೆ ವೀರಶೈವವೂ ಹೊರತಲ್ಲ. ಇದನ್ನರಿತು ಭಕ್ತಿ ಮಾಡಬೇಕೆಂಬುದು ಸ್ವರವಚನದ (೩೬) ತಿರುಳು. ತೀರ್ಥಯಾತ್ರೆ, ಉಪವಾಸ, ಸಹಸ್ರನಾಮ, ತಪಸ್ಸು, ಮುಡಿ, ಪುರಾಣಶ್ರವಣ ಇಂಥ ಆಚರಣೆಗಳಿಂದ ಶಿವನನ್ನು ಕಾಣಲು ಸಾಧ್ಯವಿಲ್ಲ. ಹಸಿದವರಿಗೆ ಅನ್ನ ನೀಡುವ, ದೀನರಿಗೆ ದಾನ ಮಾಡುವ ಮೂಲಕ ಶಿವನ ದರ್ಶನವಾಗುವುದೆಂಬ ಸತ್ಯವನ್ನು ತಿಳಿಸಲಾಗಿದೆ. ಈ ಹಾಡು ಲಾವಣಿ ರೂಪದಲ್ಲಿರುವುದರಿಂದ ಹಾಡಿದಾಗ ಇದು ತುಂಬ ಪರಿಣಾಮಕಾರಿಯಾಗುವುದರಲ್ಲಿ ಸಂಶಯವಿಲ್ಲ.

ಸ್ವರವಚನಗಳಲ್ಲಿ ಸಂಕೇತಗಳು ಉಪಮೆ ರೂಪಕಗಳು ಅಡಿಗಡಿಗೆ ಕಂಡು ಬರುತ್ತವೆ. ಪ್ರಸ್ತುತ ಸಂಪುಟದ ೩೭ನೆಯ ಹಾಡಿನಲ್ಲಿ ಕಾಗೆ ಕಾಕಗುಣಕ್ಕೂ ಬೆಳೆಕಾಯುವ ರೈತ ಒಕ್ಕಲ ಮುದ್ದಣ್ಣ ಅಖಂಡತೆಗೂ ಸಂಕೇತವಾಗಿ ಬಂದಿವೆ. ಗುರುಲಿಂಗಪ್ಪನ ಶಿಷ್ಯ, ಮುದನೂರಿನ

ಮುತ್ತಿನ ಪೆಂಡೆಯ ಮಠದ ಪ್ರೌಢ ನಿರೂಪಿಸಿದ ಹಾಡಿನಲ್ಲಿ ಮದವನ್ನು ನಿಗ್ರಹಿಸಬೇಕೆಂಬ ವಿಚಾರ ಇದೆ. ಮುಕ್ಕಣ್ಣ ಮಹದೇವನನ್ನು ನೆನೆಯುವುದರಿಂದ ಸಂತೋಷ ಸಮೃದ್ಧಿಗಳು ಲಭಿಸುತ್ತವೆ. ಆದರೆ ಮನುಷ್ಯ ತನಗೆ ಒದಗಿದ ಆನಂದದಿಂದ ಅಹಂಕಾರ ಪಡುತ್ತಾನೆ ಎಂಬುದನ್ನು (೩೮) ಸ್ವರವಚನಕಾರರು ಅರಿತಿದ್ದರು. ಮನುಷ್ಯ ಯಾವ ಯಾವ ಕಾರಣವಾಗಿ ಗರ್ವಿಸುತ್ತಾನೆಂಬುದನ್ನು ಲೋಕಾನುಭವದಿಂದ ಕಂಡುಕೊಂಡ ಸ್ವರವಚನಕಾರರು ಮನುಷ್ಯ ದಾನ ಧರ್ಮ ಮಾಡಬೇಕೆಂದೂ ಜಂಗಮರ ಪಾದತೀರ್ಥ ಬಿಟ್ಟು, ಬೇರೆ ತೀರ್ಥವನ್ನು ಅರಸಬಾರ ದೆಂದೂ ಹೇಳಿದ್ದಾರೆ. ದಾನ ಧರ್ಮವಂತೂ ಎಲ್ಲ ಕಾಲದ ಮೌಲ್ಯವ ಆಗಿದೆ.

ಗುಹೇಶ್ವರ ಅಂಕಿತದ ಮೂರು ಹಾಡುಗಳು (೩೯-೪೧) ಪ್ರಸ್ತುತ ಸಂಪುಟದಲ್ಲಿ ಸೇರಿವೆ. ಇದು ಅಲ್ಲಮನ ಅಂಕಿತವೆಂಬುದು ಜನಜನಿತ. ಆದರೆ ಮೈಲಾರ ಬಸವಲಿಂಗ ಶರಣರಿಗೆ ಚೆನ್ನವೀರ ಅಂಕಿತವೇ ಅಲ್ಲದೆ ಗುಹೇಶ್ವರ ಎಂಬ ಅಂಕಿತವೂ ಇತ್ತೆಂದು ತಿಳಿದುಬರುತ್ತದೆ. ಸದ್ಯದಲ್ಲಿ ಇಲ್ಲಿನ ಹಾಡುಗಳು ಅಲ್ಲಮನದೋ, ಮೈಲಾರ ಬಸವಲಿಂಗ ಶರಣರದೋ ಖಚಿತವಾಗಿ ಹೇಳಲಾಗದಿದ್ದರೂ ಅಲ್ಲಮನ ಸ್ವರವಚನದ ಭಾಷೆಗೂ ಈ ಸ್ವರವಚನಗಳ ಭಾಷೆಗೂ ಬಹಳಷ್ಟು ಅಂತರವಿರುವುದನ್ನು ಮರೆಯುವಂತಿಲ್ಲ. ಇಲ್ಲಿನ ೩೯ನೆಯ ಹಾಡಿನಲ್ಲಿ ಧಾನ್ಯವನ್ನು ಬೀಸಿ, ಹಿಟ್ಟು ಮಾಡಿ, ರೊಟ್ಟಿ ಸುಟ್ಟು ಅನ್ನ ಮಾಡುವ ಪಾಕಕ್ರಿಯೆಯನ್ನು ರೂಪಕವಾಗಿಟ್ಟುಕೊಂಡು ಅಧ್ಯಾತ್ಮ ನಿರೂಪಣೆ ಮಾಡಲಾಗಿದೆ. ಗುಹೇಶ್ವರ ಅಂಕಿತದ ಮೂರು ಹಾಡುಗಳು ಬೆಡಗಿನ ರೂಪದಲ್ಲಿರುವುದು ವಿಶೇಷ

ಗುಂಡಬ್ರಹ್ಮ ಅಥವಾ ಗುರುಗುಂಡಬ್ರಹ್ಮ ಅಂಕಿತದ ಮೂರು ಹಾಡುಗಳಲ್ಲಿ (೪೨-೪೪) ಸಂಸಾರದ ಅಶಾಶ್ವತೆ, ಅದರಿಂದ ಮುಕ್ತಗೊಳ್ಳುವ ಬಗೆ, ಮುಕ್ತಿ ದೊರೆಯಲು ಮಾಡಬೇಕಾದ ಸಾಧನೆಗಳು ಹಾಗೂ ಸಿದ್ಧಿ ಪಡೆದಾಗ ಆಗುವ ಅನನ್ಯ ಅನುಭವ ಇವನ್ನು ಮನಂಬುಗುವಂತೆ ವರ್ಣಿಸಲಾಗಿದೆ. ಚಿಂತೆಯಳಿದು, ಭ್ರಾಂತಿ ಬಯಲಾಗಿ, ಮಾಯೆಯ ಮರ್ಮ ತಿಳಿದು, ಕಾಮಬಾಧೆ ಪರಿಹಾರವಾಗಿ, ಪರಮಾತ್ಮನ ಪಾದದಲ್ಲಿ ಭಾವ ಬಯಲಾಗಿ ಹೋದ ಸ್ಥಿತಿಯೇ ಸಿದ್ಧಿಯ ಅತ್ಯುನ್ನತ ಸ್ತರ.

ಮಲ್ಲಾರೂಢ ಅಂಕಿತದ ಕೆಲವು ಹಾಡುಗಳು ಅಲ್ಲಲ್ಲಿ ಕಂಡುಬರುತ್ತವೆ. ಹೆಸರೇ ಸೂಚಿಸುವಂತೆ ಇದು ಆರೂಢ ಸಂಪ್ರದಾಯಕ್ಕೆ ಸೇರಿದ ಶಿಷ್ಯನೊಬ್ಬನ ಅಭಿವ್ಯಕ್ತಿ. ಪ್ರಕೃತ ಕೃತಿಯಲ್ಲಿರುವ ಈ ಅಂಕಿತದ ಒಂದು ಹಾಡು (೪೫) ಸಾಧನೆಯ ಬಳಿಕದ ಗರಿಮಾ ಸ್ಥಿತಿಯ ನಿವೇದನೆಯಾಗಿದೆ.

ಮುದ್ದುಸಂಗ ಅಂಕಿತದ ಹಾಡು (೪೬) ಈ ಸಂಪುಟದಲ್ಲಿ ಸೇರ್ಪಡೆಯಾಗಿದ್ದು, ಅದು ಹಾಗಲವಾಡಿ ಮುದ್ವೀರಸ್ವಾಮಿಯವರ ಶಿಷ್ಯನದಾಗಿರಬೇಕು. ಸಂಗಮೇಶ, ಗುರು ಸಂಗಮೇಶ ಅಂಕಿತಗಳು ಹಾಗಲವಾಡಿ ಮುದ್ವೀರಸ್ವಾಮಿಯವರದಾಗಿದ್ದು, (ಕಾಲ ಕ್ರಿ.ಶ. ೧೭೫೦) ಮುದ್ದುಸಂಗ ಅಂಕಿತದಲ್ಲಿ ಗುರುವಿನ ಹೆಸರು ಮತ್ತು ಅಂಕಿತ ಎರಡೂ ಅಂಶ ಬೆರೆತಿರುವುದನ್ನು ಕಾಣಬಹುದು. ಈ ಕವಿಯ ಕಾಲ ಕ್ರಿ.ಶ. ೧೭೮೦ರ ಸುಮಾರಿನಲ್ಲಿರಬೇಕು. ಶರಣರ ದೃಷ್ಟಿಯಲ್ಲಿ ವೀರನೆಂದರೆ ಯಾರು? ಪಾರಮಾರ್ಥವನ್ನು ಸೂರೆಗೊಂಡವನು. ಈ

ಪಾರಮಾರ್ಥವೆಂಬ ಶಂಭುವಿನ ಪಟ್ಟಣವನ್ನು ಸೂರೆಗೊಳ್ಳಲು ಬೇಕಾದ ಶಸ್ತ್ರಾಸ್ತ್ರವಾದರೂ ಬಹುವಿಶಿಷ್ಟ- ಮೌನ, ಧ್ಯಾನ, ಭಕ್ತಿ ಇತ್ಯಾದಿ.

ಅಷ್ಟದಳದ ರಥವನೇರಿ
ದೃಷ್ಟಿಯೆಂಬೋ ಗುರಿಯನಿಟ್ಟು
ಇಷ್ಟ ಮುದ್ದುಸಂಗಮಾಬ್ಬಿ
ನಿಷ್ಠೆಯಿಂದ ಸೂರೆಗೊಂಡ

ಹಾಗಲವಾಡಿ ಮುದ್ವೀರಸ್ವಾಮಿ ರಚಿಸಿದ ಸ್ವರವಚನಗಳ ಸಂಕಲನವೊಂದು ಈ ಹಿಂದೆಯೇ ಪ್ರಕಟವಾಗಿದೆ. ಇದರಲ್ಲಿ ಸೇರದ ಎರಡು ಹೊಸ ಸ್ವರವಚನಗಳು (೪೭, ೪೮) ಪ್ರಸ್ತುತ ಸಂಪುಟದಲ್ಲಿ ಇದೇ ಮೊದಲಬಾರಿಗೆ ಬೆಳಕು ಕಾಣುತ್ತಿವೆ. ಇವುಗಳಲ್ಲಿ ಒಂದು ಶರಣರ ಗುಣಲಕ್ಷಣವನ್ನು ಬಿಂಬಿಸುತ್ತದೆ- ಶರಣರ ನೆಲೆಯನ್ನು ಸತ್ಪುರುಷರಲ್ಲದೆ ನರಕುರಿಗಳು ಅರಿಯಲಾರರು. ಏಕೆಂದರೆ ಅವರು ವಾದ ಮಾಡುವುದಿಲ್ಲ. ವೇದಕ್ಕೆ ಸಿಕ್ಕುವುದಿಲ್ಲ. ಅವರು ಎಲ್ಲ ತತ್ವಗಳನ್ನು ಶೋಧಿಸಿ ಸಾಧಿಸಿ ತೋರುವರು. ಶಿವನ ಪಾದ ದಲ್ಲಿ ಮನಸ್ಸನ್ನು ಘನವಾಗಿ ಇಡುವರು. ಅವರು ಆಡಂಬರ ಮಾಡುವವರಲ್ಲ. ಬಡವರನ್ನು ಉದ್ಧರಿಸುವವರು. ಬೇರೆಯವರಿಗೆ ಕೇಡು ಬಗೆಯರು. ಕಷ್ಟ ಬಂದರೆ ಕಂದಿ ಕುಂದುವುದಿಲ್ಲ. ಬಂದದ್ದನ್ನು ಸ್ವೀಕರಿಸುವ ವಾಸ್ತವವಾದಿಗಳು. ಅವರು ಶಿವನನ್ನು ಒಡೆಯನೆಂದು ತಾವು ಆತನ ಭೃತ್ಯರೆಂದು ಭಾವಿಸಿ ಕೊಂಡಾಡುತ್ತಾರೆ. ಅವರು ವರವನ್ನು ದಯಪಾಲಿಸಬಲ್ಲರು ಎಂದು ಆದರ್ಶ ಶರಣನ ಚಿತ್ರ ನೀಡಲಾಗಿದೆ. ಇದೇ ಅಂಕಿತದ ಮತ್ತೊಂದು ಹಾಡಿನಲ್ಲಿ ಅಂಗಲಿಂಗ ಸಂಯೋಗದ ಸುಳಿವಿದೆ.

ಈ ಸಂಪುಟದಲ್ಲಿ ಸಿದ್ಧವೃಷಭ ಅಂಕಿತದ ಹಾಡೊಂದಿದ್ದು ಇದು ಯಾರದೆಂಬುದು ಅಸ್ಪಷ್ಟ. ಇದು ಶರಣರ ಆಧಿಕ್ಯವನ್ನೂ ಲಿಂಗದ ಮೇಲಿನ ವಾತ್ಸಲ್ಯವನ್ನೂ ತುಂಬ ಆತ್ಮೀಯವಾಗಿ ನಾಟಕೀಯವಾಗಿ ನಿರೂಪಿಸುತ್ತದೆ. ಜನಪದ ಗೀತೆಯಲ್ಲಿ ಬರುವ ಮಾತಾಡು ಲಿಂಗವೆ ಹಾಡಿನ ನೆನಪನ್ನು ಈ ಸ್ವರವಚನ ತಾರದಿರದು. ಈ ಅಂಕಿತದ ಇತರ ನಾಲ್ಕು ಹಾಡುಗಳು ಎಸ್. ಶಿವಣ್ಣ ಅವರ ಸ್ವರವಚನ ಸಂಪುಟಗಳಲ್ಲಿ ಕಂಡುಬರುತ್ತವೆ. ಹಾಗಾಗಿ ಈತನ ಸ್ವರವಚನಗಳ ಸಂಖ್ಯೆ ಹೆಚ್ಚಿಗೆ ಇರುವ ಸಾಧ್ಯತೆಯಿದೆ. ಲಿಂಗದ ಬೆಳಕು ಕಾಣಬೇಕಾದರೆ ಶುದ್ಧಚಾರಿತ್ರ ಹೊಂದಿರಬೇಕಾಗುತ್ತದೆ ಎಂಬುದು ಇಲ್ಲಿನ ಸ್ವರವಚನದ ಇಂಗಿತ.

ಕುಹಕಿಗಳಿಗೆ ಲಿಂಗದ ಬೆಳಕು ಕಾಣಲಾರದು. ಕಾಮಕ್ರೋಧವನ್ನು ಕಳೆದು ಆತ್ಮದಲ್ಲಿರುವ ಅರಿವನ್ನು ಅರಿತು ಗುರು ಲಿಂಗ ಜಂಗಮದ ಭಕ್ತಿಯುಳ್ಳವನಿಗೆ ಮಾತ್ರ ಬೆಳಕು ದೊರೆಯುತ್ತದೆಂಬುದು ೫೧ನೆಯ ಹಾಡಿನ ಆಶಯವಾಗಿದೆ.

ಸ್ವರವಚನಗಳಿಗೂ ದಾಸರ ಕೀರ್ತನೆಗಳಿಗೂ ಕೆಲವು ಅಂಶಗಳಲ್ಲಿ ಸಾಮ್ಯವಿದೆ. ಇದಕ್ಕೆ ಈ ಸಂಪುಟದ ೫೧ನೆಯ ಹಾಡು ಉತ್ತಮ ನಿದರ್ಶನವಾಗಿದೆ. ಇಲ್ಲಿ ವಿಷ್ಣು ಪರವಾದ ಹಾಡನ್ನು ಕವಿ ಶಿವಪರಗೊಳಿಸಿದ್ದಾನೆ. ಆದರೆ 'ಬಂಕಾಪುರದ ಆದಿಕೇಶವ' ಎಂಬ ಅಂಕಿತವನ್ನು ಮಾತ್ರ ಸ್ಮೃತಿಕೊರತೆಯ ಕ್ಷಣದಲ್ಲಿ ಹಾಗೆಯೇ ಉಳಿಸಿಕೊಂಡಂತೆ ತೋರುತ್ತದೆ. ಸ್ವರವಚನವೊಂದು ವಸ್ತುವಿನಲ್ಲಿ ಪಡೆಯಬಹುದಾದ ಬದಲಾವಣೆಗಳನ್ನು ನಿರ್ದೇಶಿಸುವ

ಸಲುವಾಗಿ ಈ ಹಾಡನ್ನು ಪಠ್ಯದಲ್ಲಿ ಸೇರಿಸಲಾಗಿದೆ. ಬಸವಣ್ಣನವರ ಎನ್ನ ಕಾಲೇ ಕಂಬ ದೇಹವೇ ದೇಗುಲ ಎಂದು ಶರೀರವನ್ನೇ ಗುಡಿಯಾಗಿ ಕಾಣುವ ಪರಿಕಲ್ಪನೆ ೫೦ನೆಯ ಹಾಡಿನಲ್ಲಿಯೂ ಪ್ರತಿಬಿಂಬಿಸಿದೆ. ಮಲೆಯ ಮಾದೇಶ್ವರ ಲಿಂಗ ಎಂಬ ಅಂಕಿತ ೫೩ನೆಯ ಹಾಡಿನಲ್ಲಿದ್ದು ಇದು ಸ್ವರವಚನವೋ ಅಥವಾ ಭಜನೆಯೋ ಆಗಿರಬೇಕು.

ವಿರೂಪಾಕ್ಷ ಅಂಕಿತದ ಕರ್ತೃ ಮುರಿಗೆಶಾಂತವೀರಸ್ವಾಮಿಗಳೆಂಬ ಅಭಿಪ್ರಾಯವಿದೆ. ಈ ಅಂಕಿತದ ಕೆಲವು ಹಾಡುಗಳು ಸ್ವರವಚನ ಸಂಪುಟ ೨ ಮತ್ತು ಸ್ವರವಚನ ವಾಹಿನಿಗಳಲ್ಲಿ ಬೆಳಕುಕಂಡಿರುವುದುಂಟು. ಪ್ರಸ್ತುತ ಸಂಪುಟದಲ್ಲಿ 'ವಿರೂಪಾಕ್ಷ' (೫೩) ಮತ್ತು 'ವಿರೂಪಾಕ್ಷಲಿಂಗ' (೫೪) ಎಂಬ ಎರಡು ಅಂಕಿತ ಗಳಿದ್ದು ಇವು ಏಕಕರ್ತೃಕವೇ ಅಥವಾ ಭಿನ್ನ ಕರ್ತೃಕವೇ ಎಂಬುದಕ್ಕೆ ಸಾಕ್ಷಿಗಳಿಲ್ಲ. ಇಲ್ಲಿನ ಹಾಡುಗಳ ಮೇಲೆ ಪುರಂದರ ಮತ್ತು ಕನಕರ ಪ್ರಭಾವವನ್ನು ಗುರುತಿಸಬಹುದು. ಭಕ್ತನ ಋಣವ ಪರಿಹರಿಸಬೇಕೆಂಬ ಕೋರಿಕೆ ೫೪ನೆಯ ಹಾಡಿನಲ್ಲಿದೆ. ಇಲ್ಲಿ ಕವಿ ತನ್ನ ಕಾಲದ ಕೆಲವೊಂದು ಸಾಮಾಜಿಕ ಮೌಲ್ಯವನ್ನು ಎತ್ತಿ ಹಿಡಿದಿದ್ದಾನೆ. ಋಣದ ವಿವಿಧ ಬಗೆಗಳನ್ನು ವಿವರಿಸುವಾಗ ದೊರೆಗಳ ನಿಷ್ಠುರ ನುಡಿಗಳನ್ನು ಕೇಳಿ ಮನನೊಂದು ಕಳೆಗುಂದಿದೆನಯ್ಯ, ಋಣವನ್ನು ಪರಿಹರಿಸು ಎಂದು ಪ್ರಾರ್ಥಿಸಲಾಗಿದ್ದು ರಾಜರ ಜನವಿರೋಧಿ ನಿಲುವನ್ನು ಬಿಂಬಿಸುವಂತಿದೆ. ಪರದ್ರವ್ಯವನ್ನು ವೆಚ್ಚ ಮಾಡುವಲ್ಲಿ ಸಂತಸಪಡುವ ಹಾಗೂ ಹಣ ಹಿಂದಿರುಗಿಸುವ ವೇಳೆಗೆ ಕೊಟ್ಟವರನ್ನು ಬೈಯುವಂಥ ದುಷ್ಟರು ಅಂದಿನ ಸಮಾಜದಲ್ಲಿಯೂ ಇದ್ದರು. 'ಸಾಲವನು ಕೊಂಬಾಗ ಹಾಲೋಗರುಂಡಂತೆ' ಎಂದು ಸರ್ವಜ್ಞ ಹೇಳಿದಂತೆ ಇಲ್ಲಿಯೂ ಕವಿ ಅಂಥವರನ್ನು ಕಂಡು ಋಣವನ್ನು ಹಲವು ದೃಷ್ಟಾಂತಗಳೊಂದಿಗೆ ಸೂಕ್ಷ್ಮವಾಗಿ ವಿವರಿಸಿದ್ದಾನೆ- ಜನನಸೂತಕ ಹತ್ತು ದಿನಕ್ಕೆ ಪರಿಹಾರ, ಮರಣ ಸೂತಕ ಹನ್ನೊಂದು ದಿನಕ್ಕೆ ಪರಿಹಾರ, ಋಣ ಸೂತಕವು ಜನ್ಮ ಜನ್ಮಾಂತರದವರೆಗೆ ಅಂಟಿಕೊಂಡು ಬರುವುದೆಂದು ಹೇಳುವಾಗ ಆ ಕಾಲದ ಸಾಂಸ್ಕೃತಿಕ ಅಂಶಗಳನ್ನು ಪರೋಕ್ಷವಾಗಿ ದಾಖಲಿಸಲಾಗಿದೆ. ಅನ್ಯರಿಂದ ಹಣ ಪಡೆದು ಮಾಡುವ ದಾನ ಧರ್ಮ ತೀರ್ಥಯಾತ್ರಾಫಲಗಳು ಹಣ ಕೊಟ್ಟವನಿಗೆ ಲಭಿಸುತ್ತವೆಯೇ ಹೊರತು ತೆಗೆದುಕೊಂಡವನಿಗಲ್ಲ ಎಂದು ಋಣದ ಹಲವು ಮುಖವನ್ನು ತೆರದಿಡಲಾಗಿದೆ. ವಿರೂಪಾಕ್ಷ ಅಂಕಿತದ ಒಂದು ಹಾಡು (೫೬) ಶಿವನ ಬಗೆಗೆ ಅತುಳವಾದ ಪ್ರೀತಿ ವ್ಯಕ್ತಪಡಿಸಿದ್ದರೆ ಮತ್ತೊಂದು ಹಾಡು (೫೫) ಕೋಲಾಟಹಾಡಿನ ಲಯದಲ್ಲಿ ಅಧ್ಯಾತ್ಮ ವಿಚಾರವನ್ನು ವರ್ಣಿಸಿದೆ..

'ನಂಜುಂಡೇಶ ಶ್ರೀಕಂಠ' ಎಂಬ ಅಂಕಿತದ ಹಾಡು ಸ್ವರವಚನವಾಹಿನಿಯಲ್ಲಿ ಈಗಾಗಲೇ ಪ್ರಕಟವಾಗಿದೆ. ಪ್ರಸ್ತುತ ಸಂಪುಟದಲ್ಲಿಯೂ ನಂಜುಂಡೇಶ ಎಂಬ ಅಂಕಿತದ ಹಾಡು ಕಾಣಸಿಕೊಂಡಿದ್ದು, ಇವರಿಬ್ಬರೂ ಭಿನ್ನರೆ ಅಭಿನ್ನರೆ? ಎಂಬ ಬಗೆಗೆ ಆಧಾರಗಳಿಲ್ಲ. ಇಲ್ಲಿ ದೊರೆತ ಹಾಡಿನಲ್ಲಿ (೫೭) ಇಷ್ಟಲಿಂಗದಿಂದ ಲಿಂಗೈಕ್ಯ ಸ್ಥಿತಿಯವರೆಗೆ ವಿವಿಧ ಪ್ರಕ್ರಿಯೆಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತ ಇದನ್ನು ತೋರಿದ ಗುರುವನ್ನು ಪ್ರಶಂಸಿಸಲಾಗಿದೆ.

ನಂಜನಗೂಡಿನ ನಂಜುಂಡೇಶನ ಮೇಲೆ ಅನೇಕ ಬಿಡಿಹಾಡುಗಳು ಲಭ್ಯವಿವೆ. ಈ

ನಿಟ್ಟಿನಲ್ಲಿ ೫೯ನೆಯ ಹಾಡು ಕೂಡ ನಂಜುಂಡನನ್ನು ಕುರಿತಿದೆ. ಇದು ಒಂದು ಕಾಲಕ್ಕೆ ಭಜನೆ ರೂಪದಲ್ಲಿಯೂ ರೂಢಿಯಲ್ಲಿದ್ದಿರಬೇಕು. ಕೊಟ್ಟೂರೇಶನ ಬಗೆಗಿನ ಒಂದು ಸ್ತುತಿಯಲ್ಲಿ (೬೦) ಕೊಟ್ಟೂರೇಶನನ್ನೇ ಪತಿ ಎಂದು ಭಾವಿಸಲಾಗಿದೆ.

ಇಷ್ಟಲಿಂಗ ಎಂಬುದು ಮೆಡ್ಲೇರಿ ಶಿವಲಿಂಗನ ಅಂಕಿತ. ಈತನ ಅನೇಕ ಹಾಡುಗಳು ಸ್ವರವಚನ ಸಂಪುಟ ೪ ರಲ್ಲಿ ಬೆಳಕುಕಂಡಿವೆ. ಪ್ರಸ್ತುತ ಸಂಪುಟದಲ್ಲಿ ಇಷ್ಟಲಿಂಗೇಶ ಅಂಕಿತದ ಹಾಡು (೬೧) ಸಂಕಲನಗೊಂಡಿದೆ. ಭಗವಂತ ಸರ್ವಾಂತರ್ಯಾಮಿ ಎಂಬುದು ಅನುಭಾವಿಗಳ ನಿಲುವು. ಇದೇ ನಿಲುವು ೬೨ ನೆಯ ಹಾಡಿನಲ್ಲಿಯೂ ಕಂಡುಬರುತ್ತದೆ.

ಮುತ್ತಿನಪೆಂಡ್ಯ ಗುರುಶಂಕರೇಶ್ವರನ ಶಿಷ್ಯ ಮರುಳುಸಂಗಯ್ಯ ಎಂಬ ಉಲ್ಲೇಖ ೬೩ನೆಯ ಹಾಡಿನಲ್ಲಿ ಸಿಕ್ಕುತ್ತದೆ. ಈ ಹಾಡು ಮರುಳುಸಂಗಯ್ಯನ ಶಿಷ್ಯನಿಂದ ರೂಪುಗೊಂಡಿರಬೇಕು. ಕೌಟುಂಬಿಕ ದೃಷ್ಟಾಂತವನ್ನು ನೀಡಿ ಶಿವನಲ್ಲಿ ಹೊಂದಿರಬೇಕಾದ ಅಚಲನಿಷ್ಠೆಯನ್ನು ಇಲ್ಲಿ ಸೊಗಸಾಗಿ ವರ್ಣಿಸಲಾಗಿದೆ. ಕುಟುಂಬದಲ್ಲಿ, ಸಮಾಜದಲ್ಲಿ ಗರತಿಗೆ ಹಿರಿದಾದ ಸ್ಥಾನವಿದೆ. ಈ ಹಾಡಿನಲ್ಲಿ ಭಕ್ತನನ್ನು ಗರತಿಗೆ ಸಂಕೇತವಾಗಿಟ್ಟುಕೊಂಡು ಗರತಿ ಹೇಗೆ ಪತಿಗೆ ನಿಷ್ಠಳಾಗಿರುತ್ತಾಳೋ ಅದೇ ರೀತಿ ಭಕ್ತ ಶಿವನಿಗೆ ನಿಷ್ಠನಾಗಿರಬೇಕೆಂದು ಬೋಧಿಸಲಾಗಿದೆ.

ನಾಗಲಿಂಗ ಅಂಕಿತದ ಹಾಡೊಂದು ಸ್ವರವಚನವಾಹಿನಿಯಲ್ಲಿ ಎಡೆಪಡೆದಿದೆ. ಇದೇ ಅಂಕಿತದ ಬೇರೊಂದು ಹಾಡು ಪ್ರಸ್ತುತ ಸಂಪುಟದಲ್ಲಿ ಸೇರಿದೆ (೬೪), ಅದು ಶಿವಯೋಗಕ್ಕೆ ಮೂರ್ತರೂಪ ನೀಡುತ್ತದೆ. ಬೆಳಗಾಂನಲ್ಲಿ ಒಬ್ಬ ನಾಗಲಿಂಗನಿದ್ದುದು ತಿಳಿದುಬರುತ್ತದೆ.

ವೀಣೆ ಗುರುಬಸವಯ್ಯನಿಗೆ 'ಗುರುಬಸವ' ಎಂಬ ಅಂಕಿತವಿದೆ. ಪ್ರಸ್ತುತ ೬೫ನೇ ಹಾಡಿನಲ್ಲಿ ಗುರುಬಸವೇಶಲಿಂಗ ಎಂಬ ಅಂಕಿತದ ಸೂಚನೆಯಿದೆ. ಇದರ ಕರ್ತೃ ತಿಳಿಯದು. ಈ ಹಾಡಿನಲ್ಲಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಪಂಚಾಕ್ಷರಿ ಮಂತ್ರ ಎಂಬ ಅಷ್ಟಾವರಣಗಳನ್ನು ತುಂಬ ಸರಳವಾಗಿ ವಿವರಿಸಲಾಗಿದೆ.

ಸ್ವರವಚನಗಳು ಸಾಮಾನ್ಯವಾಗಿ ಅಂಕಿತ ಸಹಿತವಾಗಿರುತ್ತವೆ. ಆದರೆ ಈ ಸಂಪುಟದ ಕೆಲವು ಸ್ವರವಚನಗಳು ಪಲ್ಲವಿ ನುಡಿಗಳನ್ನು ಹೊಂದಿದ್ದರೂ ಅಂಕಿತಗಳಿಲ್ಲವಾಗಿವೆ. ಉದಾಹರಣೆಗೆ ೬೬, ೬೭ ನೆಯ ಹಾಡು. ಆದರೂ ಇಲ್ಲಿ ಕಂಡುಬರುವ 'ಮದಗಜದಂತೆ ಲಾಲಿಸುವ ಭೇಕನಂತೆ (೬೬)' ಮುಂತಾದ ಉಪಮೆಗಳು ಸರಳಸೌಂದರ್ಯದಿಂದ ಗಮನ ಸೆಳೆಯುತ್ತವೆ.

'ರುದ್ರ' ಅಂಕಿತದ ಒಂದು ಹಾಡು ಪ್ರಪ್ರಥಮವಾಗಿ ಈ ಸಂಪುಟದಲ್ಲಿ ಕಂಡು ಬಂದಿದೆ (೬೭). ಆದರೆ ಇದು ಅಂಕಿತವೇ ಎಂಬ ಅನುಮಾನ ಉಂಟಾಗುತ್ತದೆ. ಇದೇ ರೀತಿ ೬೮ನೆಯ ಹಾಡಿನ ಅಂತ್ಯದಲ್ಲಿ ಬರುವ 'ತಿಪ್ಪ' ಎಂಬುದೂ ಕೂಡ ಸಂದಿಗ್ಧವಾಗಿದೆ. ಇಲ್ಲಿನ ತಿಪ್ಪ ನಾಯಕನಹಟ್ಟಿಯ ತಿಪ್ಪೇರುದ್ರ ಇರಬಹುದು. ಈ ಹಾಡಿನಲ್ಲಿ ವೀರಶೈವೇತರ ದೇವತೆಗಳಾದ ವಿಷ್ಣು ಬ್ರಹ್ಮ ನಾರದರನ್ನು ಕೂಡ ಹೆಸರಿಸಲಾಗಿದೆ. ಆದರೆ 'ಬಸವನಂತೆ

ಪೊತ್ತು ಚರಿಸಲರಿಯೆ' 'ರಾಣಿ ಪಾರ್ವತಿಯಂತೆ ಅರ್ಚಿಸಲರಿಯೆ' ಎಂಬ ಮಾತುಗಳಿದ್ದು ಈ ಹಾಡು ಶಿವಪರವೆಂಬುದನ್ನು ಸಾಬೀತುಪಡಿಸುತ್ತದೆ. ಇದರ ಕರ್ತೃ ಹಿಂದಿನ ಪುರಾಣಗಳನ್ನು ಚೆನ್ನಾಗಿ ಓದಿಕೊಂಡಿರುವಂತೆ ತೋರುತ್ತದೆ. ಆದುದರಿಂದ ಒಂದೊಂದು ಪಂಕ್ತಿಯೂ ಓದುಗರ ಭಾವಕೋಶವನ್ನು ವಿಸ್ತರಿಸುತ್ತದೆ.

'ಶ್ರೀ ಗುರುನಾಥ' (?) ಎಂಬ ಅಂಕಿತವಿರುವ ಹಾಡಿನಲ್ಲಿ (೬೯) ಹೇಳುವುದು ಒಂದು, ಮಾಡುವುದು ಮತ್ತೊಂದು ಎಂಬಂಥ ಶರಣರ ನಡವಳಿಕೆಯನ್ನು ಚಿತ್ರಿಸಿದೆ. ಯಾವಾಗಲೂ ಶರಣರ ಕಥೆಗಳನ್ನು ಹೇಳುತ್ತ ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳುವ ವ್ಯಕ್ತಿಗಳ ಬೂಟಾಟಿಕೆ ಇಲ್ಲಿ ಬಯಲಾಗುತ್ತದೆ. ಗುರುಸೇವೆ ಮಾಡದೆ ಅರಿವನ್ನು ಪಡೆಯದ ಇದ್ದರೆ ನಾಯಿಜನ್ಮಕ್ಕೆ ಬೀಳುವಿರೆಂದು ಕವಿ ಎಚ್ಚರಿಕೆ ನೀಡಿದ್ದಾನೆ. ಕಾವಿಯನ್ನುಟ್ಟು ಕಾಮವನ್ನು ಬಿಡದಿರುವವರು ಬ್ರಹ್ಮಜ್ಞಾನಿಗಳಾಗಿದ್ದರೂ ಅಹಂಕಾರ ಬಿಡದೆ ಮುಕ್ತಿ ಪಡೆದುಕೊಳ್ಳಲಾರರೆಂದು ನೀತಿಬೋಧೆ ಮಾಡಲಾಗಿದೆ.

ಬಡವರ ಶೋಷಣೆ ಸಾರ್ವಕಾಲಿಕ ವಿಷಯವಾಗಿದೆ. ಇದನ್ನು ಸ್ವರವಚನಕಾರರೂ ಗಮನಿಸಿದ್ದಾರೆ. ಪ್ರಸ್ತುತ ಗಿರಿಜೇಶ ಅಂಕಿತದ ಹಾಡಿನಲ್ಲಿ (೭೦) ಬಡವರ ಬಾಯಿ ಬಡಿಯಬೇಡ, ತಪ್ಪಿದರೆ ಎಕ್ಕಲನರಕದಲ್ಲಿ ಹಾಕುವರೆಂದು ಬಲ್ಲಿದರಿಗೆ ತೀವ್ರವಾಗಿ ನುಡಿಯಲಾಗಿದೆ. ಸ್ವರವಚನಗಳು ಕೆಲವೊಮ್ಮೆ ನೀತಿಬೋಧೆ ಮಾಡುವ ಮೂಲಕ ಸಮಾಜವನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತವೆ. ಮನುಷ್ಯ ದಾನ ಧರ್ಮ ಪರೋಪಕಾರಗಳನ್ನು ಮಾಡಬೇಕು, ನಂಬಿದವರಿಗೆ ಕೇಡೆಣಿಸಬಾರದು, ಮೂಢರೊಡನೆ ಒಡನಾಟ ಸಲ್ಲದು, ಹೊನ್ನು ಹೆಣ್ಣು ಮಣ್ಣಿನಾಸೆ ಬಿಡಬೇಕು, ತಂದೆ ತಾಯಿ ಹಿರಿಯರನ್ನು ಬೈಯಬಾರದು, ಬದುಕಿಗಾಗಿ ಬೇರೆಯವರೊಡನೆ ಹಗೆತನ ಮಾಡಬಾರದು ಮೊದಲಾದ ಹಿತನುಡಿಗಳ ಮೂಲಕ ಜನತೆಯ ವ್ಯಕ್ತಿತ್ವ ನಿರ್ಮಾಣದಲ್ಲಿಯೂ ಮುಖ್ಯಪಾತ್ರ ವಹಿಸುವುದನ್ನು ಕಾಣಬಹುದು.

ಶಾಂತಮಲ್ಲೇಶ ಅಂಕಿತದ ಕೆಲವು ಹಾಡುಗಳು ಸ್ವರವಚನ ವಾಹಿನಿ ಮತ್ತು ಸ್ವರವಚನ ಸಂಪುಟ ೨ ರಲ್ಲಿ ಕಂಡುಬಂದಿದ್ದು ಇಲ್ಲಿಯೂ ಈ ಅಂಕಿತದ ಒಂದು ನೂತನ ಹಾಡು (೭೧) ಸೇರ್ಪಡೆಯಾಗಿದೆ. ಲಿಂಗಾರ್ಚನೆಯ ಫಲಗಳನ್ನು ತಿಳಿಸುವ ಈ ಸ್ವರವಚನ ೧೧ ನುಡಿಗಳಷ್ಟು ದೀರ್ಘವಾಗಿದೆ.

ನಂದಿ ಅಥವಾ ನಂದೀಶ ಎಂಬುದು ಸೋದೆ ಸದಾಶಿವರಾಯನ ಅಂಕಿತ. ಇಲ್ಲಿ 'ಸೋದೆ ಗುರು ನಂದೀಶ್ವರ' ಎಂಬ ಅಂಕಿತವೊಂದು ಕಂಡು ಬರುತ್ತದೆ. ಆದರೆ. ಇದು ಸದಾಶಿವರಾಯನದೇ ಅಲ್ಲವೇ ಎಂಬುದು ಖಚಿತಗೊಳ್ಳಬೇಕಿದೆ. ಹೀನರ ಸಹವಾಸ ದಿಂದ ಕಷ್ಟ ತಪ್ಪದು ಎಂದು ಹೇಳುವ ಈ ಹಾಡಿನಲ್ಲಿ ಲಿಂಗಧ್ಯಾನದಿಂದ ಅರಿವು ಉಂಟಾಗು ವುದೆಂಬುದನ್ನೂ ದೈನಂದಿನ ಬದುಕಿಗೆ ಬೇಕಾದ ಕೆಲವು ನೀತಿ ಮಾತುಗಳನ್ನೂ ನಿರೂಪಿಸಿದೆ.

ಆದಿಕವಿ ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ 'ಒಲ್ಲೆಸಿ ಬಾಳ್ವುದೇ ಕಷ್ಟ ಇಳಾದಿನಾಥರ' ಎಂದು ನುಡಿದಂತೆ ನಂದಿಕೇಶ್ವರ ಅಂಕಿತದ ೭೩ನೆಯ ಹಾಡಿನಲ್ಲಿಯೂ

ಇದೇ ಅಭಿಪ್ರಾಯ ವ್ಯಕ್ತವಾಗಿದೆ.

ದೊರೆಗಳ ರೀತಿ ಬೇರೆ ಸನ್ನಿಧಿಯ
ಲ್ಲಿರುವ ಮತಿ ಬೇರೆ
ಪರಿಪರಿ ವಿರಹದ ಪಾರುಪತ್ಯಗಳಿಂದ
ಧರೆಯೊಳು ಬಡವರು ದಣಿದರೋ ಶಿವನೆ

ಎಂದು ಈ ಸ್ಥಳದಲ್ಲಿರುವುದು ಬಹಳ ಕಷ್ಟವೆಂಬುದನ್ನು ತಿಳಿಸುತ್ತಾನೆ ಕವಿ. ಬುಧರೆನಿಸಿಕೊಂಡವರು ನಿರಕ್ಷರಿಗಳನ್ನು ದೂರ ಮಾಡುತ್ತಿದ್ದ ರೀತಿಯನ್ನು ಕುರಿತು ನೊಂದು ನುಡಿದಿದ್ದಾನೆ. ಶೋಷಣೆ ಪ್ರತಿಭಟನೆ ಇಂಥ ಯಾವ ಸೊಲ್ಲು ಇಲ್ಲದಿದ್ದಂಥ ಕಾಲದಲ್ಲಿ ಆ ನೆಲೆಯಿಂದ ಸಮಾಜವನ್ನು ನೋಡಿರುವ ರೀತಿ ಅನನ್ಯವಾಗಿದೆ.

ಸೋಮೇಕಟ್ಟೆ ಚನ್ನವೀರಸ್ವಾಮಿಯ ಅಂಕಿತ ಗುರುಚೆನ್ನಬಸವ. ಪ್ರಸ್ತುತ ಸಂಪುಟದಲ್ಲಿ ಶ್ರೀ ಗುರುಚೆನ್ನಬಸವೇಶ ಎಂಬ ಅಂಕಿತವಿದ್ದು ಇದೂ ಕೂಡ ಆತನದಿರಬಹುದೇ ಎಂಬ ಬಗ್ಗೆ ಸಂಶಯವಿದ್ದೆ. ಬಡವ ಬಲ್ಲಿದ ಮೇಲು ಕೀಳು ಎಂಬ ತಾರತಮ್ಯ ಮಾಡುವ ಪ್ರವೃತ್ತಿ ಈ ಸಮಾಜದಲ್ಲಿ ಎಂದಿನಿಂದಲೂ ಇದ್ದದ್ದೆ. ದೊಡ್ಡ ಜಂಗಮರನ್ನು ಕಂಡರೆ ನಮಸ್ಕರಿಸುವುದು, ಸಣ್ಣ ಜಂಗಮರನ್ನು ಕಂಡರೆ ಅಸಡ್ಡೆ ಮಾಡುವುದನ್ನು ಕವಿ ಇಲ್ಲಿ ಖಂಡಿಸಿದ್ದಾನೆ. ಸ್ತುತಿ ಪ್ರಶಂಸೆಗೆ ಒಲಿಯದವರಾರು? ಇದು ಸಾಧು ಸನ್ಯಾಸಿಗಳನ್ನೂ ಬಿಟ್ಟಿದ್ದಲ್ಲ. ಹೊಗಳಿಕೆಗೆ ಉಬ್ಬಿ ಭಕ್ತಿ ಮಾಡುವುದು, ಹೊಗಳದವರನ್ನು ಹೀನಾಯವಾಗಿ ಕಾಣುವುದು ವಿಗಡಮನುಜರ ಲಕ್ಷಣ. ಆದುದರಿಂದ ಜಂಗಮವನ್ನು ಹಿರಿದು ಕಿರಿದೆನ್ನದೆ ಸಮಾನವಾಗಿ ಕಂಡು ಅರ್ಚಿಸುವವರಿಗೆ ಮಾತ್ರ ಗುರುಕೃಪೆ ದೊರೆಯುವುದು ಎಂಬುದನ್ನು ಹಾಡಿನಲ್ಲಿ ಸ್ಪಷ್ಟಪಡಿಸಿದೆ.

ರಾಚೋಟಿ ಸ್ವಾಮಿ ಅಂಕಿತದ ಹಾಡೊಂದು ಸ್ವರವಚನ ಸಂಪುಟ ೪ ರಲ್ಲಿ ಸಿಕ್ಕುತ್ತದೆ. ಪ್ರಾಯಶಃ ಇದೇ ಪರಂಪರೆಯ ರಾಚೋಟಿ ವೀರೇಶನ ಉಲ್ಲೇಖ ಈ ಸಂಪುಟದಲ್ಲಿ (೭೬) ಕಂಡುಬರುತ್ತದೆ. ಇದರಲ್ಲಿ ಕೊಟ್ಟೂರು ಶರಭೇಶನನ್ನೂ ಹೆಸರಿಸಲಾಗಿದೆ. ಈ ಹಾಡಿನ ಅಂತ್ಯದಲ್ಲಿ ಬರುವ ಇಷ್ಟಲಿಂಗೇಶ ಎಂಬುದು ಅಂಕಿತವಾಗಿರಲೂಬಹುದು. ಇಲ್ಲಿ ರುದ್ರನು ಚಂದ್ರಶೇಖರನಾದದ್ದು, ವಿಷವನ್ನು ಗಂಟಲಲ್ಲಿಟ್ಟು ನೀಲಕಂಠನಾದದ್ದು, ಕುಶಲ ಕೋವಿದನಾದದ್ದು, ಭಸ್ಮ ಲೇಪಿಸಿಕೊಂಡದ್ದು, ಕಿಡಿಗಣ್ಣು ಸೂಸಿದ್ದು, ರುಂಡಮಾಲಿಯಾದದ್ದು, ದಕ್ಷಬ್ರಹ್ಮನನ್ನು ನಗೆಪಾಟಲು ಮಾಡಿದ್ದು ಮೊದಲಾದ ಪೌರಾಣಿಕ ಪ್ರಸಂಗಗಳನ್ನು ತರಲಾಗಿದೆ.

ಸ್ವರವಚನಗಳು ಸಾಮಾನ್ಯ ಜನರನ್ನು ಉದ್ದೇಶಿಸಿ ಸೃಷ್ಟಿಗೊಂಡವಾಗಿರುವುದರಿಂದ ಜನಪದ ಲಯ ಛಂದಸ್ಸುಗಳನ್ನು ತುಂಬ ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ರಾಮದುರ್ಗದ ಈಶ ಬೆಟ್ಟದನಂಜೇಶ ಎಂಬ ಅಂಕಿತದ ಸ್ವರವಚನವು (೭೭) ಜೋಗುಳ ಹಾಡಿನ ರೂಪದಲ್ಲಿದೆ. ಈ ಸ್ವರವಚನದ ಕರ್ತೃ ರಾಯಚೂರು ಭಾಗದವನಿರಬೇಕು. ಏಕೆಂದರೆ ಈತನ ಭಾಷೆಯ ಮೇಲೆ ಉರ್ದು ಭಾಷೆಯ ಪ್ರಭಾವವಿರುವುದನ್ನು ಗುರುತಿಸಬಹುದು. ಉದಾಹರಣೆಗೆ

ಜೋ ಜೋ ಅಲ್ಲಾರೆ ಕಂದಮ್ಮ
ಸೈ ಶಾಭಾಸೆ ಕಂದಮ್ಮ

ಎಂಬ ಸಾಲುಗಳನ್ನು ನೋಡಬಹುದು, ಕವಿ ಮಕ್ಕಳ ಆಭರಣಗಳಾದ ಅಂದುಗೆ ಅರಳೆಲೆ ಮಾಗಾಯಿ ತೋಳಭಾಪುರಿ ಇವುಗಳನ್ನು ದಾಖಲಿಸಿದ್ದಾನೆ. ಹಾಗೆಯೇ ಚಿಣ್ಣಿಕೋಲು, ಚೆಂಡು, ಬುಗರಿ ಆಟಗಳನ್ನೂ ಹೇಳಿ ಶಿಶುಗೀತೆಯ ಆವರಣ ಕಲ್ಪಿಸಲಾಗಿದೆ. ಹೀಗೆ ಹೊರನೋಟಕ್ಕೆ ಇದು ಜೋಗುಳ ಪದದಂತೆ ಕಂಡುಬಂದರೂ ಇಲ್ಲಿ ಬರುವ ಕಂದಮ್ಮ ಕೇವಲ ಶಿಶುವಾಗಿ ನಿಲ್ಲದೆ ಆತ್ಮದ ಪ್ರತೀಕವಾಗಿದೆ. ಚಂದಮಾಮ ಹಾಡಿನ ಧಾಟಿಯಲ್ಲಿರುವ ೭೮, ೭೯ ನೆಯ ಹಾಡುಗಳೂ ಕೂಡ ಕಣ್ಣಿಗೆ ಕಂಡಷ್ಟು ಸರಳವಾಗಿರದೆ ಆಂತರ್ಯದಲ್ಲಿ ಬೆಡಗಿನ ತಂತ್ರ ಅಳವಡಿಸಿಕೊಂಡಿವೆ.

ಹೊನ್ನಕವಿಯ ಅಂಕಿತ ಗಂಗೇಶ. ಈ ಅಂಕಿತದ ಹಲವಾರು ಹಾಡುಗಳನ್ನು ಜಿ.ಎ. ಶಿವಲಿಂಗಯ್ಯನವರು ಈಗಾಗಲೇ ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಪ್ರಸ್ತುತ ಸಂಪುಟದ ಅಲ್ಲಮಪ್ರಭುಸಂಗೀತದಲ್ಲಿ (೮೦) ಕಂಡುಬರುವ ಗಂಗೇಶಲಿಂಗ ಎಂಬ ಅಂಕಿತವು ಹೊನ್ನಕವಿಯದೆಂದು ಹೇಳಲು ದುಸ್ತರವಾಗುತ್ತದೆ. ಏಕೆಂದರೆ ಈ ಹಾಡಿನ ಕಡೆಯಲ್ಲಿ 'ಮಹಿಸೂರೊಳೆಸೆದು ತೋರುವ ಪ್ರಭುಗಂಗೇಶಲಿಂಗ ಲೀಲೆಯ' ಎಂಬ ಉಲ್ಲೇಖವಿದೆ. ಇದು. ಕವಿ ಮೈಸೂರಿನಲ್ಲಿ ಕೂಡ ಕೆಲವು ಕಾಲ ಇದ್ದಿರಬೇಕೆಂಬುದನ್ನು ಸೂಚಿಸುತ್ತದೆ. ಅಲ್ಲಮನನ್ನು ಕುರಿತ ಈ ಹಾಡಿನಲ್ಲಿ ೧೩ ನುಡಿಗಳಿವೆ. ಅಲ್ಲದೆ ಆತನಿಗೆ ಸಂಬಂಧಿಸಿದ ವಿವಿಧ ಲೀಲೆಗಳನ್ನು ಸಂಕ್ಷಿಪ್ತವಾಗಿ ದಾಖಲಿಸಿರುವುದು ಇಲ್ಲಿನ ವೈಶಿಷ್ಟ್ಯ.

ಅವಧೂತಸಂಪ್ರದಾಯಕ್ಕೆ ಸೇರಿರಬಹುದಾದ ಒಂದು ಹಾಡು (೭೨) ಈ ಸಂಪುಟ ದಲ್ಲಿದ್ದು, ಅದು ಶಿವಪರವಾಗಿದ್ದು ವೀರಶೈವ ಕಟ್ಟಿನಲ್ಲಿ ದೊರೆಯುವುದರಿಂದ ಇಲ್ಲಿನ ಪಠ್ಯದಲ್ಲಿ ಅಳವಡಿಸಲಾಗಿದೆ.

ಭಕ್ತಿಪರಹಾಡುಗಳಲ್ಲಿ ಸುಪ್ರಭಾತದ ಹಾಡುಗಳಿಗೆ ವಿಶಿಷ್ಟ ಸ್ಥಾನವಿದೆ. ಆಸ್ತಿಕರ ದೈನಂದಿನ ಚಟುವಟಿಕೆಗಳು ಆರಂಭವಾಗುವುದೆ ದೈವಸ್ಮರಣೆಯಿಂದ. ಹಾಗಾಗಿ ಮನುಷ್ಯ ದೇವರಿಗೂ ಉದಯರಾಗ ಹಾಡುವ ಪರಿಪಾಠ ಹಿಂದಿನಿಂದಲೂ ಬಂದಿದೆ. ಈ ನಿಟ್ಟಿನಲ್ಲಿ ಏಳು ಹಾಡುಗಳು (೮೧-೮೭) ಇಲ್ಲಿವೆ. ಇಂಥ ಹಾಡುಗಳಲ್ಲಿ ಸೂರ್ಯೋದಯ ಹಕ್ಕಿಗಳ ಉಲಿ ಮೊದಲಾದ ಪ್ರಾಕೃತಿಕ ಚಟುವಟಿಕೆಯೇ ಅಲ್ಲದೆ ಶಿವಪೂಜೆ ಶಿವಶರಣರ ನಾಮಾವಳಿ ಹಾಗೂ ಕೆಲವು ಪೌರಾಣಿಕ ಅಂಶಗಳು ಸಾಮಾನ್ಯ. ಪ್ರಸ್ತುತ ಸಂಪುಟದಲ್ಲಿ ಸಂಕಲನ ಗೊಂಡಿರುವ ಉದಯರಾಗಗಳಲ್ಲಿ ಹೆಚ್ಚಿನವು ನಂಜುಂಡೇಶ್ವರನನ್ನು ಕೇಂದ್ರವಾಗಿಟ್ಟು ಕೊಂಡಿವೆ. ದನುಗೂರಿನ ಬಿಲ್ಲೇಶನ ಮೇಲೂ ಒಂದು ಹಾಡಿದೆ.

ಜನಪದ ಸೋಬಾನೆಮಟ್ಟಿನಲ್ಲಿ (೮೮) ಉಯ್ಯಾಲೆ ಹಾಡಿನಲ್ಲಿ (೮೯) ಶಿವನನ್ನು ಸ್ತುತಿಸುವ, ಆತನ ಹಲವು ಲೀಲೆಗಳನ್ನು ವರ್ಣಿಸುವ ಹಾಡುಗಳು ಇಲ್ಲಿ ಸೇರಿವೆ.

ಮಂಗಳಾರತಿಗೆ ಸಂಬಂಧಿಸಿದಂತೆ ೧೭ ಹಾಡುಗಳು (೯೦-೧೦೬) ಈ ಸಂಕಲನದಲ್ಲಿ

ಸೇರಿವೆ. ಈ ಬಗೆಯ ಹಾಡುಗಳಿಗೆ ಅಂಕಿತವಿಲ್ಲ. ಆದರೆ ಪಲ್ಲವಿ, ನುಡಿ ಇರುವುದರಿಂದ ಮತ್ತು ಇವು ವೀರಶೈವಪರವಾಗಿರುವುದರಿಂದ ಸ್ವರವಚನಗಳ ಸಾಲಿನಲ್ಲಿಯೇ ಸ್ಥಾನ ಕಲ್ಪಿಸಿದೆ. ಶಿವಸಂಬಂಧಿಯಾದ ಅನೇಕ ಪೌರಾಣಿಕ ಪ್ರಸಂಗ ಗಳನ್ನು ಅಳವಡಿಸಿಕೊಂಡು ಈ ಹಾಡುಗಳು ರೂಪು ತಳೆದಿವೆ. ಹೀಗೆ ಈ ಸಂಕಲನದಲ್ಲಿ ವೈವಿಧ್ಯಮಯವಾದ ಪ್ರಾದೇಶಿಕ ವೈಶಿಷ್ಟ್ಯದ ಸ್ವರವಚನಗಳಿದ್ದು ಅವು ಈ ಪ್ರಕಾರದ ಸಮೃದ್ಧತೆಯನ್ನು ಅಭಿವ್ಯಕ್ತಿಗೊಳಿಸುತ್ತವೆ. ಪ್ರತಿಭೆಯ ಕಾರಣವಾಗಿ, ವ್ಯುತ್ಪತ್ತಿಯ ಕಾರಣವಾಗಿ, ಅನುಭಾವದ ಕಾರಣವಾಗಿ, ಸಾಧನೆಗಳ ಸಿದ್ಧಿಗಳ ಕಾರಣವಾಗಿ ಈ ಮಿಶ್ರ ಸಂಪುಟದ ಸ್ವರವಚನಗಳಲ್ಲಿ ತರತಮಗಳಿವೆ. ಆದುದರಿಂದ ಇವುಗಳನ್ನು ಒಂದೇ ಮಾನದಂಡದಿಂದ ಅಳೆಯಲಾಗುವುದಿಲ್ಲ.

ಗ್ರಂಥಸಂಪಾದನೆ: ಮಿಶ್ರ ಸಂಪುಟದ ಪರಿಷ್ಕರಣ ಕಾರ್ಯ ತುಂಬ ಶ್ರಮವನ್ನು ಬೇಡುವಂಥದ್ದು. ಏಕೆಂದರೆ ಇಲ್ಲಿನ ಒಂದೊಂದು ಹಾಡೂ ಹಲವು ಹಸ್ತಪ್ರತಿಗಳಲ್ಲಿ ಹಂಚಿ ಹೋಗಿರುತ್ತವೆ. ಇಂಥ ಹಾಡುಗಳನ್ನು ಶೋಧಿಸುವುದು ತ್ರಾಸದಾಯಕ ಕಾರ್ಯ. ಅನೇಕ ಓಲೆಗಳನ್ನು ಜಾಲಾಡಿದ ಬಳಿಕ ಒಂದು ಹಾಡು ದೊರೆತರೂ ಅದನ್ನು ನೇರವಾಗಿ ಪ್ರಕಟಿಸುವಂತಿಲ್ಲ. ಆ ಹಾಡನ್ನು ಇಟ್ಟುಕೊಂಡು ಹತ್ತಾರು ಅಚ್ಚಾದ ಸ್ವರವಚನ ಸಂಪುಟಗಳನ್ನು ಪರಿಶೀಲಿಸಿ ಪ್ರಕಟಿತವೆ, ಅಪ್ರಕಟಿತವೆ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ಹಾಗಾಗಿ ಏಕೈಕ ಆಕರಗಳುಳ್ಳ ಮಿಶ್ರಸ್ವರವಚನಗಳ ಪರಿಷ್ಕರಣಕಾರ್ಯ ಇತರ ಕೃತಿಗಳ ಪರಿಷ್ಕರಣಕಾರ್ಯಕ್ಕಿಂತ ಕಠಿಣಕರವಾದುದು. ಇಷ್ಟಾದರೂ ಈ ತೆರನ ಮಿಶ್ರಸಂಪುಟವನ್ನು ತೆರೆದು ನೋಡಿದಾಗ ಸಂಪಾದಕರ ದಣಿವು ಅದೃಶ್ಯವಾಗಿಯೇ ಉಳಿಯುತ್ತದೆ.

ಪ್ರಸ್ತುತ ಸ್ವರವಚನ ಸಂಪುಟ ೧೦ ಗ್ರಂಥದ ಸಂಪಾದನೆಯ ಸಂದರ್ಭದಲ್ಲಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಭಂಡಾರದ ೨೨ ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಈ ಪೈಕಿ ಕೆ. ೧೧೫೭, ಕೆ. ೧೧೩೧, ಕೆ. ೧೫೩೮, ಕೆ. ೧೨೮೨, ಕೆ. ೧೧೮೨, ಕೆ. ೧೦೧೨, ಕೆ. ೯೩೭, ಕೆ. ೧೭೬೩, ಕೆ. ೧೧೨೬, ಕೆ. ೧೯೯೨, ಕೆ. ೧೭೯೨, ಕೆ. ೯೯೪, ಕೆ. ೧೮೦೪, ಕೆ. ೧೨೯ ಎಂಬಿವು ಓಲೆ ಪ್ರತಿಗಳು. ಕೆಬಿ ೬೭೨, ಕೆಎ ೪೪೪, ಕೆಬಿ ೪೨೫, ಕೆಬಿ ೫೪೫, ಕೆಬಿ ೫೩೮, ಕೆಬಿ ೪೧೭, ಕೆಬಿ ೩೩೨, ಕೆಬಿ ೬೯೯, ಕೆಎ ೫೧೪ ಎಂಬಿವು ಕಾಗದದ ಪ್ರತಿಗಳು. ಇವುಗಳಿಂದ ೧೧೦ ಹಾಡುಗಳನ್ನು ಪ್ರತಿಮಾಡಿಕೊಳ್ಳಲಾಗಿದೆ. ಅನುಬಂಧದಲ್ಲಿ ಅನ್ಯಭಾಷೆಯ ಮೂರು ಸ್ವರವಚನಗಳನ್ನು ಕೊಡಲಾಗಿದೆ. ಇಲ್ಲಿ ಬಳಸಿಕೊಂಡ ಹಸ್ತಪ್ರತಿಗಳಲ್ಲಿ ಸ್ವರವಚನಗಳೇ ಅಲ್ಲದೆ ಬೇರೆ ಕೃತಿಗಳೂ ಸೇರಿವೆ. ಇವುಗಳ ಲಿಪಿಕಾರರು ಅವ್ಯುತ್ಪನ್ನರಾದುದರಿಂದ ಬರವಣಿಗೆಯ ದೋಷ, ಅಕ್ಷರಸ್ಖಾಲಿತ್ಯ, ಛಂದೋಭಂಗ ಹಾಗೂ ಹಸ್ತಪ್ರತಿಗಳು ಕಾಲಗರ್ಭ ಸೀಳಿ ಬರುವಾಗ ಆಗಿರುವ ತ್ರುಟಿತಗಳು ಹೇರಳವಾಗಿವೆ. ಏಕೈಕ ಆಕರಗಳಿಂದ ಪರಿಷ್ಕರಣಕಾರ್ಯ ನಡೆದಿರುವುದರಿಂದ ಸಮಸ್ಯೆಗಳು ಅಧಿಕ. ಅವುಗಳನ್ನು ಯಥಾಮತಿ ಸರಿಪಡಿಸಿದೆ. ಹೆಚ್ಚಿನ ಪ್ರತಿಗಳು ದೊರೆತಾಗ ಇನ್ನಷ್ಟು ಉತ್ತಮ ಪಾಠಗಳು ಲಭಿಸುವ ನಿರೀಕ್ಷೆ ಇದೆ. ಪ್ರಸ್ತುತ ಸಂಪುಟದ ಪ್ರಕಟಣೆಯಿಂದ ಸ್ವರವಚನಸಾಹಿತ್ಯಲೋಕಕ್ಕೆ ಅನೇಕ ಹೊಸ ಸ್ವರವಚನಕಾರರು ಹಾಗೂ ಅವರ ಸ್ವರವಚನಗಳು ಸೇರಿದಂತಾಗಿದೆ.

ಸ್ವರವಚನ ಸಾಹಿತ್ಯದ ಮೇಲೆ ವಿಶೇಷ ಒಲವನ್ನಿಟ್ಟುಕೊಂಡು ಈ ಪ್ರಕಾರದ ಅಮೂಲ್ಯಕೃತಿಗಳನ್ನು ಹೊರತಂದಿರುವ ಶ್ರೀ ಶ್ರೀ ಶಿವರಾತ್ರಿದೇಶಿಕೇಂದ್ರ ಸ್ವಾಮಿಗಳು ಈ ಗ್ರಂಥಪರಿಷ್ಕರಣೆಗೆ ಆದೇಶವಿತ್ತು ತಮ್ಮ ಸಂಸ್ಥೆಯ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯ ಮೂಲಕ ಪ್ರಕಟಿಸಿದ್ದಾರೆ. ಅದಕ್ಕಾಗಿ ಸುತ್ತೂರು ಶ್ರೀಗಳಿಗೆ ಅನಂತ ನಮನಗಳು.

ನಾಡಿನ ಪ್ರಸಿದ್ಧ ಸಂಶೋಧಕರೂ ಪಂಪಪ್ರಶಸ್ತಿ ವಿಜೇತರೂ ಆದ ಡಾ॥ಎಂ. ಎಂ. ಕಲಬುರ್ಗಿ ಅವರ ಪ್ರೇರಣೆ ಮಾರ್ಗದರ್ಶನದಿಂದ ಈ ಕೃತಿ ಹೊರಬರುತ್ತಿದೆ. ಇವರಿಗೂ ಹಸ್ತಪ್ರತಿಗಳನ್ನು ಬಳಸಿಕೊಳ್ಳಲು ಅನುಮತಿ ನೀಡಿದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ. ಡಿ. ಕೆ. ರಾಜೇಂದ್ರ, ಸಂಪಾದನ ವಿಭಾಗದ ಉಪನಿರ್ದೇಶಕರಾದ ಡಾ. ಮೈಲಹಳ್ಳಿ ರೇವಣ್ಣ, ಹಿರಿಯ ಸಂಶೋಧಕರಾದ ಶ್ರೀ ಜಿ. ಜಿ. ಮಂಜುನಾಥನ್ ಇವರಿಗೂ ವಂದನೆಗಳು ಸಲ್ಲುತ್ತವೆ.

ಮೈಸೂರು ಡಾ. ವೈ. ಸಿ. ಭಾನುಮತಿ
29-8-98

## ಪರಿವಿಡಿ

## ೧. ಗುರುಪಾದ ನಮೋ

ಪಾದ ನಮೋ ಗುರುಪಾದ ನಮೋ
ಪಾದ ನಮೋ ಹರಪಾದ ನಮೋ ॥ ಪಲ್ಲ ॥

ಭೃಕುಟಿಮಧ್ಯದಲಿ ಕುಳಿತು ಅದೆ
ಧಿಕಿಟ ತೊಂಗಿಣುಯೆಂದು ನುಡಿಯುತದೆ ೧

ಝುಗಝುಗಿಸುತ ಕಾಣುತದೆ
ಧಿಗಿಲು ಭುಗಿಲುಯೆಂದು ಕೇಳುತದೆ ೨

ಚಂದ್ರಸೂರ್ಯರೊಂದುಗೂಡುತದೆ
ಚಂದದಿ ನೀಲಜ್ಯೋತ್ಯಾಗುತದೆ ೩

ಇರುಳೂ ಗತಿಲ್ಲದೆ ಚರಿಸುತದೆ
ಪರಮತಾರಕನಾಗಿ ತೋರುತದೆ ೪

ದಶವಿಧನಾದವು ಸೂಸುತದೆ
ಪೆಸರು ಗುರುವು ವೃಷಭೆನಿಸುತದೆ ೫

## ೨. ಎಲ್ಲ ತಿಳಕೊಳ್ಳಬೇಕು

ಕದಳಿಯ ವನ ಹೊಗಬೇಕು ನೀವು
ಚದುರ ಜಾಣರು ಎಲ್ಲ ತಿಳಕೊಳ್ಳಬೇಕು ॥ ಪಲ್ಲ ॥

ಭೇರಿನಾದವು ಕೇಳಬೇಕು ತನ್ನ
ಮೇರುಗಿರಿಯೊಳಪೊಗಲಿಬೇಕು
ಆರಿಗ್ಹೇಳದೆ ಇರಬೇಕು ತನ್ನ
ತಾರೆ ಶಶಿ ರವಿಗಳ ಕಾಣಬೇಕು ೧

ಕುಂಡಲಿ ತಿರುವಲಿಬೇಕು ಮೂರು
ಮಂಡಲ ಮೀರಿ ಬ್ರಹ್ಮವ ಕಾಣಬೇಕು

ಕಂಡುಕಾಣದೆ ಇರಬೇಕು ತನ್ನ
ಕೆಂಡದ ಜ್ಯೋತಿ ಶಾಂಭವಿ ಕೂಡಬೇಕು ೨

ಬೆರತೂ ಬೆರೆಯದೆ ಇರಬೇಕು ತನ್ನ
ಗುರುತದ ಗೊತ್ತಿಗೆ ಸಾರಿ ಹೊಗಬೇಕು
ಹೊರಗಳ ವ್ಯಾಪಾರ ಬಿಡಬೇಕು ತನ್ನ
ಸ್ಥಿರಮುಕ್ತ ಗುರುವೃಷಭನಾಗಬೇಕು ೩

## ೩. ಲಿಂಗ ತಾ ಲೀಲೆ

ತಾ ಲೀಲ ಲಿಂಗ ತಾ ಲೀಲ
ತಾ ಲೀಲ ಲಿಂಗ ತಾ ಲೀಲ ॥ ಪಲ್ಲ ॥

ಹೊರಗಣ ಶಬ್ದವ ಕೇಳದಂದದಿ ಬಲು
ಮೊರವುತಲಿದೆ ನಾದ ತಾ ಲೀಲ
ಎಲರುಣಿಫಣಿಯನು ಪಸರಿಸಿ ಮುನಿಯೊಳು
ಮುಳುಗಿರದೆ ಆಡುತಲಿದೆ ತಾ ಲೀಲ ೧

ಕರಣಂಗಳೆಲ್ಲವು ಪರಹರಲಿಂಗದ
ಕಿರಣಂಗಳಾದವು ತಾ ಲೀಲ
ಪರಿಪರಿಯಾಗಿಹ ಬಿಂದುರತ್ನಂಗಳು
ಸರಗೊಳಿಸಿರುತಿವೆ ತಾ ಲೀಲ ೨

ಕಂಗಳಿಗತಿಶಯವಾಗಿ ಹೊಳೆವ ಬೆಳು
ದಿಂಗಳು ಮೂಡಿತು ತಾ ಲೀಲ
ತಿಂಗಳಬೆಳಕಿಲಿ ತಾರಕಿಗಳು ಮಿಗೆ
ರಂಜಿಸುತಿರುತಿವೆ ತಾ ಲೀಲ ೩

ಕತ್ತಲ ಮನೆಯೊಳು ಕಣ್ಣದೆರೆದು ನೋಡೆ
ಹೊತ್ತು ಮೂಡಿತು ಲಿಂಗ ತಾ ಲೀಲ
ಎತ್ತೆತ್ತ ನೋಡಲು ತಾವರೆ ಹೂವಿನ
ಗೊತ್ತು ಕಾಣುತಲಿದೆ ತಾ ಲೀಲ ೪

ಮೇಲಣಕೊಣನೊಳು ತಾವರೆ ಹೂವಿನ ದೇ
ವಾಲಯವಿದ್ದು ತಾ ಲೀಲೆ
ಮೇಲುವುಂಟಪದೊಳು ಗುರುವೃಷಭೇಶನ
ಲೀಲ ವಿನೋದವು ತಾ ಲೀಲೆ ೫

## ೪. ಅಜ್ಞಾನಿ ನೀ

ಅಜ್ಞಾನಿ ನೀ ಅಜ್ಞಾನಿ
ಸುಜ್ಞಾನ ಉಳ್ಳವರ
ಆಜ್ಞೆಯಿಂದಲಿ ನೀನು
ಮಾಜ್ಞಾನಿ ಆಗಿಲ್ಲೋ ॥ ಪಲ್ಲ ॥

ಪಶುವಿಗೆ ಲಿಂಗದ ಮುದ್ರೆಯ ಒತ್ತಿದೊಡದು
ವೃಷಭನಾಗುವುದೇನೋ ಅಜ್ಞಾನಿ
ಎಸೆವ ಸಾಸಿರದಳ ಸೂಸುವ ಕಮಲವು
ಕುಶಲದಿ ಬಳಸಿಲ್ಲೊ ಅಜ್ಞಾನಿ ೧

ಒಡಲಿಗಾಸೆಯ ಮಾಡಿ ಬಡವರಿಗುಪದೇಶ
ಕೊಡುವ ದುರಿತೇನೊ ಅಜ್ಞಾನಿ
ಹಡೆಯೆತ್ತಿ ಆಡುವ ಊರ್ಧ್ವಕುಂಡಲಿಯನು
ಕಡೆಯಾಟ ನೋಡಿಲ್ಲೊ ಅಜ್ಞಾನಿ ೨

ಬರಿಯ ಬೊಮ್ಮದ ಮಾತು ಬಾಯಲ್ಲಿ ಬೀರುತಿ
ಗರುವಿಲಿ ಕೂತಿದ್ದ ಅಜ್ಞಾನಿ
ಧರೆಯೊಳಧಿಕವಾದ ಗುರುವೃಷಭೇಶಗೆ
ಸರಿಯಾಗಬಲ್ಲೇನೊ ಅಜ್ಞಾನಿ ೩

## ೫. ಬೆಳಗುತಿದೆ ವಸ್ತು

ಬೆಳಗುತಿದ ವಸ್ತು ಬೆಳಗುತಿದೆ
ಥಳಥಳ ಹೊಳೆವಂತ ಕಳೆಯಾದ ಮನೆಯೊಳು ॥ ಪಲ್ಲ ॥

ಪೀತ ಶ್ವೇತ ಹರಿತ ಮಂಜಿಷ್ಟಾದಿ ಕ
ಪೋತ ಮಾಣಿಕಕೆ ಮೀರಿಹುದೆ
ಜಾತ ಅಳಿದು ನಿರ್ಜಾತನಾದಾತಂಗೆ
ಜ್ಯೋತಿರ್ಮಯವಾಗಿ ತೋರುತದೆ ೧

ಹತ್ತುಅಂಗುಲ ಮಧ್ಯ ಒತ್ತಿನೋಡಿದರೆ
ಮುತ್ತು ಪವಳವು ಸುರಿವುತದೆ
ಸತ್ತುಚಿತ್ತಾನಂದ ನಿತ್ಯವಾಗಿ ನಿಜ
ಗೊತ್ತಿನೊಳಗೆ ತಾನು ಸುಳಿವುತದೆ ೨

ಇರಳ್ಯಾಗಲಿಲ್ಲದೆ ತೆರಪಿಲ್ಲದಿರುವುದು
ಪರಮಜ್ಯೋತಿಯಾಗಿ ಮೆರೆವುತದೆ
ಧರೆಯೊಳಧಿಕವಾದ ಗುರುವೃಷಭೇಶಗೆ
ಕರ ಮನ ಭಾವದಿ ಬೆರಸಿಯದೆ ೩

## ೬. ಎಂತು ಮರೆಯಲೆ

ಎಂತು ಮರೆಯಲೆ ರಮಣಿ ಮಾಡಿದುಪಕಾರವನು
ಕಂತುವೈರಿಯ ಸಂಗ ಕೂಡಿಸಿದೆ ನೀನು ॥ ಪಲ್ಲ ॥

ಹಸಿರು ಹಳದ್ಯಾಗುವದು ಮೊಸರಿನ ತೆರಯಿಹದು
ಪಸರಿಸಿ ಎಸಳೆಸಳು ಕಾಣುತಿಹದು
ಶಶಿರವಿಯ ತೋರುವದು ಬಿಸಿಗಣ್ಣ ಸೂಸುವದು
ಕುಶಲರಿದು ಈ ಪರಿಯ ತಿಳಿಸಿದ್ಯಮ್ಮ ೧

ಮುಂಬಾಗಿಲವ ಪೊಕ್ಕು ಹಂಬಲಿಸಿ ಪೋದ ನೀ
ಕಂಬಸೂತ್ರಬೊಂಬೆ ತಿರುವಿದೇನೆ
ತಂಬಿಸಲಾರದ ತವಕದಿಂದಲಿ ಬೆಳಗೆ
ಶಾಂಭವಿಯ ಗಣತಿಂಥಿಣಿಯ ಕಂಡೆನಮ್ಮ ೨

ಒಳಹೊರಗೆ ಆಡುವದು ಥಳಥಳನೆ ಹೊಳೆಯುವದು
ಬೆಳಗಿನೊಳು ಮಹಾಬೆಳಗಾಗುತಿಹದು
ಇಳೆಯೊಳಗೆ ಗುರುವೃಷಭೇಶ್ವರನು ತಾ
ನುಳಿದು ಚಿತ್ಕಳೆಯುದ ಮನೆಯೊಳಗೆ ಭವ ಕಳೆದನಮ್ಮ ೩

## ೭. ಪಾಹಿಮಾಂ ಪರಮೇಶ

ಪಾಹಿಮಾಂ ಪರಮೇಶ ಪುಣ್ಯವಿಲಾಸ ನಂದಿ
ವಾಹ ನಿನ್ನ ನಂಬಿದೆ ಮುನ್ನ
ದೇಹವರ್ಜಿತ ದಿವಿಜಹಿತ ಸಲೆ ಸಂ
ದೇಹದೂರ ಸತ್ಯೋದ್ಧಾರ ॥ ಪಲ್ಲ ॥

ಅಂಗಜಭಂಗ ನಿರಂಗ ಶರಣರಂತರಂಗಕೂಟ ಕುಜನೋತ್ಪಾಟ
ಮಂಗಳ ಮಹಿಮತರಂಗ ಮಾತಂಗ ಜಿನಾಂಗಧರ ದನುಜಾಪಹಾರ
ತುಂಗನಿಗಮತುರಂಗಮಹಸ್ತ ಕುರಂಗಭೂಷ ಭುವನೋಲ್ಲಾಸ
ಜಂಗಮರೂಪ ಜಗಂಗಳ ಪೊರೆವ ಪತಂಗಧಾಮ ಪಾವನನಾಮ ೧

ಭೂಧರಧನ್ವ ದಯಾನಿಧಿ ನಟಣವಿನೋದವಿಗ್ರಹ ನಮಿತೋತ್ಸಾಹ
ವೇದಾಗಮ ತರ್ಕಾದಿಯತೀತ ಜಗದಾಧಾರ ಜನಮಂದಾರ
ಶ್ರೀಧರನಯನಾಂಕ ಪಾದದ್ವಯ ಪರವಾದಿಖಂಡ ಪಂಚಮತುಂಡ
ಆದಿತ್ಯಬ್ಜಾನಲ ನೇತ್ರತ್ರಯಾಶ್ರಿತಬಾಂಧವ ಶರಣಯ್ಯ ದೇವ ೨

ಉರಗಫಣಾಮಣಿ ಕಂಠದ್ಯುತ ಶುಭಕರಶೂಲಿ ಸತ್ಕಪಾಲಿ
ಖರತರ ತೇಜೋಮಯ ಮಹಿಮೋದಯ ಗಿರಿಕಾಂತಾ ಕರುಣಶ್ರಾಂತ
ಸರಸಕವೀಶ್ವರಸಾಗರವರ್ಧನ ಸ್ಮರಮಿತ್ರ ಸುಲಲಿತಗಾತ್ರ
ಜರಮರಣಧ್ವಂಸ ಜಯ ಶಾಂತವೀರೇಶ್ವರಲಿಂಗ ಕರುಣಾಪಾಂಗ ೩

## ೮. ಹೊನ್ನುಯ್ಯಾಲೆಯನೇರಿ

*ರಾಗ: ಕುಂಭಕಾಂಬೋಧಿ*

ಕಾಮಿನಿಯರುಯ್ಯಾಲಾಡಿದರು ಕಡುಗಾಡಿಯೊಳು
ಶ್ರೀಮಹಾಶಾಂತವೀರೇಶ್ವರನ ನೆನೆದು ॥ ಪಲ್ಲ ॥

ಪೊಳೆಯೆ ನೀಲದ ಕಂಬ
ಒಲೆಯೆ ಮರಕತದ ತೊಲೆ
ಗಿಳಿಯೆ ಕಸವರದ ಸರ
ಪಳಿಯು ಮಣಿಗಳ ಲುಳಿಯ

ಲಳವಟ್ಟುದ ಬೆಳೆಯ ಬೆಡಗಿನೊಳು ಬಂ
ದೆಳೆವರೆಯದಂಗನೆಯರು ಬೇಗ

ಕುಳಿತುಯ್ಯಲೆಯೊಳು ಕೋಯೆಂದು ಹಸ್ತದೊಳು ಸರ
ಪಳಿಯ ಪಿಡಿವುತ್ತಂದು ಪಾದನಳಿನವ ನೀಡೆ
ಝುಣರೆಂದು ಉಲಿಯಲುಳಿತಂದುಗೆಗಳಲಿ ಸಂದು ಪಾಡ
ಲಳಸಿದರು ಪರಶಿವನ ಪದವ ಮನದಂದು ೧

ಚೆನ್ನೆಯರು ಚೆಲುವಸಂಪನ್ನೆಯರು ಸಕಲ ವಿ
ತ್ಪನ್ನೆಯರು ಕಲೆಯರಿವ ಕನ್ನೆಯರು ಕರುಣಗುಣ
ರನ್ನೆಯರು ಬಲ್ಲ ಬಾವನ್ನಗಂಧಿಯರು ಶಶಿ
ಸನ್ನಿಭಾನನೆಯರೆಲ್ಲ ನಿಲ್ಲದೆನ್ನಯ್ಯನಬ್ಜಾಕ್ಷಪ್ರಿಯ ಪ್ರಮಥ
ಸನ್ನಿಹಿತ ಶರಣು ಪೆಣ್ಮಯ್ಯ ಕೊಡಲಿ
ಚೆನ್ನಬೆಜ್ಜರ ನೇಣುಗಯ್ಯ ತೊಳಪ
ಕನ್ನಡಿಗ ಕಾಯೊ ದಮ್ಮಯ್ಯ ಎಂದು
ಹೊನ್ನುಯ್ಯಲೆಯನೇರಿ ನುತಿಸೆ ಪಲಬಗೆಯ ೨

ಜರಯೆ ಕಾರ್ಮುಗಿಲಮುಡಿ ಸುರಿಯೆಮುಡಿದರಲೊಡನೆ
ಮೊರೆಯೆ ಮಧುದುಂಬಿದನಿಗರರ ಕೋಗಿಲ ಹಿಂಡು
ನರೆಯೆ ಮೊಗದೊಳು ನಗೆಯು ಸುರಿಯೆ ಕಂಗಳ ಥಾಳ
ಮರೆಯಲುಯ್ಯಲೆಯನೇರಿ ಮೀರಿ
ಪರಿಪೂರ್ಣ ಮಹಿಮಾಭಿರಾಮ ದಯಾ
ಭರಿತ ಭಕ್ತೌಘಸುಪ್ರೇಮ ಕಲಾ
ಧರಜೂಟ ಕಾರುಣ್ಯಧಾಮ ಮುನೀಶ್ವರ
ಶರಧಿ ಸಂಪೂರ್ಣ ಸೋಮಹೇಮ
ಧರಣಿಭೃದ್ಧಾಮ ಹಿತವಿರಲೆಮ್ಮೊಳೆಂದು ೩

ಏರೆ ದಶನದ ಕಾಂತಿ ಮೀರೆ ಮೈ ಬೆಮರುವನಿ
ಸೋರೆ ನಿಡುಜಡೆ ನಲನನೂರ ಮುತ್ತಿನಹಾರ
ತೋರೆ ಮುಂದಲೆದು ಕೆಲಸಾರೆ ಕಂಚುಕಿಜಾರೆ ನಾರಿಯರು ನಲಿವುತಮಮ
ಸಾರೆ ಸಾರಿ ಸೂರ್ಯಾನಲ ತ್ರಿಯಕ್ಷ ದನುಜ
ಮಾರಾಂತಕಘಪುರ ವಿಪಕ್ಷ ವಿನುತ
ಸಾರ ಸತ್ಕವಿದಯಾಕಟಾಕ್ಷ ಮಹಾ
ಮೇರು ಸದ್ಧುವನ ಮಮಪಕ್ಷ ನಲನನೀರೇಳ ಪಾಲಿಪ ನಿರಪೇಕ್ಷನೆಂದು ೪

ತೀಡೆ ಮೈಗಂಪು ತೇಲಾಡೆ ಲಾವಣ್ಯರಸ
ಮೂಡೆ ಮುಗುಳ್ಮೊಲೆಗಳಲ್ಲಾಡೆ ವಸ್ತ್ರದ ಸೆರಗು
ಕೂಡ ಚೆನ್ನಲೆಯಲೆಡೆಯಾಡಲತಿ ಚಿತ್ರ ಶ್ರುತಿಗೂಡುತಾಳಾಪವೆರಸಿ ಸ್ಮರಿಸಿ
ನೀಡಜಧ್ವಜ ಭಸಿತಭೂಷ ಮಹಾ
ಕ್ಷ್ವೇಡ ಕಂಧರಧರ ನಿರಾಶಾವರವ
ಮಾಡೊಲ್ದು ಶಾಂತವೀರೇಶಯೆಂದು ಪ್ರೌಢೆಯರು ಪೊಗಳ್ವರುಯ್ಯಲಾಡಿ ಬರೆ ಹರುಷ ೫

## ೯. ಕರೆತಾರೆ ಮಾನಿನಿ

*ರಾಗ: ತಲುಗ ಕಾಂಬೋಧಿ*

ಕಾಣದೆ ಕಳವಳಿಸುತಿಹೆನುಯೆನ್ನ
ಪ್ರಾಣದೊಡೆಯ ಪರಮೇಶನ ವಾರಿಜನೇತ್ರ
ವಾಣೀಶರಾಳ್ವ ವಿಶ್ವೇಶನ ವಾದಿಸುವರ್ಗೆ ಕಾಣಿಸದಚಲನಿವಾಸನ
ಬಾಣಸಂಹರ ಬಾಣನವೆಟ್ಟುದಾಣ ಬಲು
ಜಾಣನ ನಿರ್ವಾಣವಂದಿತ ಪದನ
ಮಾಣದೆ ಕರೆತಾರೆ ಮಾನಿನಿ ॥ ಪಲ್ಲ ॥

ಆನಂದಮಯಕಾಯ ಜಯ ಮದ
ಕಾನನ ವೀತಿಹೋತ್ರನ ಕವೀಂದ್ರ ಸಂ
ತಾನಹೃದಯ ಕಂಜಮಿತ್ರನ ಪೂಜಿಸುತಿ
ರ್ಪಾನಾಥಜನವನಚೈತ್ರನ ಹೀನದಕ್ಷವಿ
ತಾನ ಶಿಕ್ಷನ ಮೌನಿರಕ್ಷನ ದಾನಪಕ್ಷನ
ಭಾನು ಸೋಮಾನಲಾಕ್ಷನ ಈ ಕ್ಷಣ ಕಾಣಿಸು ಕಂಜನಿಭಾನನೆ ೧

ವೇದಪಾಠ ಯತಿತತಿ ಹೃನ್ಮಂಟ
ಪಾದಿ ತಾಂಡವರೂಪನ ಮಹಾಮೇರು
ಭೂಧರ ಘನಚಾಪನ ಭಜಿಸುವ ಭಕ್ತಾದಿ ತಾಪತ್ರಯಲೋಚನ
ಆದಿಮಧ್ಯಾಂತಭೇದನ ಭವಸೂದನ ಸುವಿ
ನೋದನ ಮುಕ್ತಿಸಾಧನ ಜಗ
ದಾಧಾರವಾದವನ ಕಾದಲೆ ತಂದು ಕಾಣಿಸು ೨

ಭಾರತಿಪತಿಮಸ್ತಕಹಸ್ತ ಸ
ರೋರುಹ ಮನ್ಮನಪೀಠನ ಮಹಾದುಃಖ

ಘೋರಜನನ ಕುಜೋತ್ಪಾಟನ ನಂಬಿದರೊಳು
ಕಾರುಣ್ಯಾಕರ ಕಡೆನೋಟನ ಧೀರನ ಪುರದೂರನ ಪುಣ್ಯ
ಸಾರನ ದಯಾಪೂರನ ಶಾಂತವೀರೇಶ್ವರಲಿಂಗನ
ಕರತಾರೆ ಕಂಠೀರವ ಮಧ್ಯಳೆ ೩

## ೧೦. ಅನುದಿನ ಪೊರೆಯೆ

*ರಾಗ: ತೆಲುಗು ಕಾಂಬೋಧಿ*

ಅಂಬಿಕೆಯನುದಿನ ಪೊರೆಯೆನ್ನ ತ್ರಿ
ಯಂಬಕನರ್ಧದೇಹಿನಿ ತ್ರಿದಶನಿಕು
ರುಂಬ ಸೇವಿತೆ ಸಿಂಹವಾಹಿನಿ ಕವೀಂದ್ರಕದಂಬ ಹೃತ್ಸಾರಸಗೇಹಿನಿ
ಅಂಬುಜಾನನೆ ತುಂಬುಜವ್ವನೆ
ಶಂಭುಜೀವನೆ ಕುಂಭಿಯಾನೆ ಕೃ
ಪಾಂಭೋನಿಧಿವರ್ಧನೆ ನಿಮ್ಮ ನಂಬಿದೆ ನಗನಂದನೆ ॥ ಪಲ್ಲ ॥

ಗಂಧರ್ವ ಗಣವೃಂದ ಸನಕ ಸಾ
ನಂದ ವೃಂದಾರಕ ವಂದಿತೆ ದುರಿತಭವ
ಖಂಡನ ಭಜಕಾರ್ತಿ ವಂದಿತ ಮರೆಯ ಹೊಕ್ಕೆ
ಮಂದಗಮನೆ ಭಕ್ತಾನಂದಿತೆ ಸೌಂದರೆ ಸತ್ಯ
ಮಂದಿರೆ ಶಂಭುಕಂಧರೆ ಕವಿಮಂದಾರೆ ಕಂಜ
ಗಂಧಿನಿ ಕಡುಚದುರೆ ಕಾಯ್ವುದೆಂದೆಂದು ಕರುಣಾಕರ ೧

ಮಾಕುಮಾರಕ ಪ್ರಾಣಪ್ರತಿಷ್ಠೆ ದಿ
ವಾಕರಕೂಟ ಸಂಕಾಶೆ ದಯಾ
ನ್ವೀಕಚರಣೆ ಪ್ರಣವೋಲ್ಲಾಸಿ ಶುಂಭಾದಿಯ
ನೇಕ ಕನಿಷ್ಠ ದನುಜನಾಶೆ
ಶ್ರೀಕರೆ ಸುಕೃತಾಕರೆ ಸೌಖ್ಯಶೇಖರೆ ಶಾಂತಿ
ಸಾಕಾರೆ ಪುಂಡರೀಕಲೋಚನೆ ಗಂಭೀರೆ ಜರೆ
ಶೋಕ ಮರಣ ಭವಸಂಹಾರೆ ೨

ಆದಿಶಕ್ತಿಯನಾಥಕಂಟಕಜನ
ಸೂದನೆ ಸಲ್ಲಲಿತಶೀಲೆ ಗಾಂಗೇಯಗ

ಣಾದಿನಾಯಕಮಾತೆ ಮತ್ಪಾಲೆ
ಭೇದಿಸುವ ತತ್ಕಾಲೆ ತಾಮಸಗುಣನಿರ್ಮೂಲೆ
ಸಾಧುಸನ್ನುತೆ ವೇದವರ್ಜಿತೆ ಮಾಧವಾರ್ಚಿತೆ
ಮಾದೇವ ಗುರುಶಾಂತವೀರೇಶನ ಕಾದಲೆ ಕರುಣಾನ್ವಿತೆ ೩

## ೧೧. ಮರೆಯದಿರು ಮಹೇಶನಡಿಯ

*ರಾಗ: ತೋಡಿ*

ಮರೆಯದಿರು ಮಹೇಶನಡಿಯ ಮನವೆ
ಹರಿಯದಿರು ಪರಸತಿಯ ಕಡೆಯ ॥ ಪಲ್ಲ ॥

ಕೂಡದಿರು ಖುಲ್ಲಮಾನವರ ನೀನು
ಬೇಡದಿರು ದೈನ್ಯದಿಂ ಪರರ
ಹಾಡದಿರು ಹರನಲ್ಲದವರ ಸಡ್ಡೆ
ಮಾಡದಿರು ಸಟೆಯನಾಡುವರ ೧

ಹೋಗದಿರು ಹೊಲೆಮನುಜರೆಡೆಗೆ ಶಿರವ
ಬಾಗದಿಱು ಪರದೈವದಡಿಗೆ
ಬೀಗದಿರು ಪಾಷ್ಟೆಯರ ನುಡಿಗೆ ಮುಕ್ತಿ
ಯಾಗುವದು ಹೀಗಿರಲು ಕಡೆಗೆ ೨

ಬಾರದಿರು ಭವಭವಂಗಳಲಿ ಮುನಿದು
ಹೋರದಿರು ಗುರುಹಿರಿಯರಲ್ಲಿ
ಮೀರದಿರು ಶಿವನಿರಿಸಲಲ್ಲಿ ಶಾಂತ
ವೀರೇಶನಗಲದಿರುಯಿಲ್ಲಿ ೩

## ೧೨. ಕಾಮಿನಿ ಕರೆತಾರೆ

*ರಾಗ: ಬಿಲಹರಿ*

ಕಾಮಿನಿ ಕರೆತಾರೆ ಕರುಣಸ್ವಭಾವನ
ಸಾಮಗಾನಾನಂದನ ಶರಣವೃಂದನ ॥ ಪಲ್ಲ ॥

ಕನಕಾದ್ರಿಕೂಟನ ಕಮಲಾರಿಜೂಟನ
ಧನಪಸನ್ಮಿತ್ರನ ದಯಾಗಾತ್ರನ
ಮನುಮುನಿಪ್ರೇಮನ ಮಹಿಮಾಬ್ಧಿಸೋಮನ
ವನಜಾಕ್ಷಪ್ರಿಯನ ವರದಾಯನ ೧

ದೇವದೇವೋತ್ತಮನ ಧರಣೆಭೃದ್ಧಾಮನ
ಪಾವನಕಾಂತನ ಪರಮಶಾಂತನ
ಭೂವಳಯರಕ್ಷನ ಬುಧನುತ ತ್ರಿಯಕ್ಷನ
ಕಾವನ ಸುಟ್ಟನ ಕಡುದಿಟ್ಟನ ೨

ಉರಗೇಂದ್ರಾಭರಣನ ಉನ್ನತ ಸತ್ಕರುಣನ
ಶರಣಾರ್ಥಿಭಂಗನ ಸತ್ಕೃಪಾಪಾಂಗನ
ಧರಗೇಕೋದೇವನ ಧರ್ಮಪ್ರಭಾವನ
ಗುರುಶಾಂತವೀರೇಶನ ಗುಣವಿಭೂಷನ ೩

## ೧೩. ನೆರಹಬಹುದೆ ದೇವ

*ರಾಗ: ದೇಸಿ*

ನೆರಹಬಹುದೆ ದೇವ ನೀತಿಯಿಲ್ಲದ ನೀಚ
ತರುಣಿಯರ ನಿಜಗುಣೆಗಳಾದ ಪುರುಷರಿಗೆ ॥ ಪಲ್ಲ ॥

ಮುಗುಳಂಬನಲೆಯಿಂದ ಮುಂದುಗೆಟ್ಟೆನು ಎಲೆ
ಸುಗುಣೆ ಸಲಹೆಂದು ಸಲೆದೈನ್ಯದಿಂದ
ನಗುತ ಪತಿ ಕೈವಿಡಿಯೆ ನಾಯ ತೆರದಂತಡ್ಡ
ಮೊಗವಿಕ್ಕಿ ಕಚ್ಚುತಿಹ ಕಾಮಿನಿಯರ ೧

ಪ್ರಾಣ ಹೋಯಿತಿದೆ ಪಂಚಬಾಣನೆಸುಗೆಯೊಳೆನ್ನ
ಕೇಣವಿಲ್ಲದೆ ಮನ್ನಿಸೆಂದು ತಿಳುಹೆ
ಕೋಣನಂದದೊಳು ಕೆಕ್ಕರಿಸಿ ಕೋಪದಿ ನೋಡಿ
ಕೇಣದಿಂ ಕಡೆನುಡಿವ ಕೆಡುಕಿವೆಣ್ಣುಗಳ ೨

ಓರೆಯೇತಕೆ ಒಲಿದು ಕಾಂತನೊಳು ಕಲೆಯರುಹು
ಮೇರ ಬೇಡೆಂದು ಮಿಗೆ ಕಾಲ್ಗೆರಗಲು

ಮಾರಿಯಂದದದೆ ಹಾರಿ ಮತ್ಸರಿಸಿ ಮಾರ್ಮಲೆವ
ನಾರಿಯರ ನಯನೀತಿ ನಿಪುಣ ಪುರುಷರಿಗೆ ೩

ಎಂದೆಂದು ನಿನ್ನೊಡನೆಯೆರವಿಲ್ಲದಿರ್ಪನೊಳ
ಗಿಂದು ಮುನಿದಿಹುದೇನೆ ಮಡದಿಮಣಿಯೆ
ಒಂದಿನಿತು ಪೊತ್ತು ಒಡಗೂಡೆಂದು ಬಡಬಡಿಸೆ
ಹಂದಿಯಂದದಿ ಮುರುಗಿ ಹಲ್ಲ ಕಡಿವವಳ ೪

ಇನಿಯನಿಂಗಿತವನರಿಯದ ಜಾಡ್ಯಲಲನೆಯರ
ಘನವಾದ ಪುರುಷರ್ಗೆ ಕೈಗೂಡಿಸಿ
ಮನವ ನೋಯಿಸುತಿಹುದು ಬ(ಲುಹೀನ ಜ)ನ್ಮವಿಡಿದು
ನಿನಗೆ ಹೇಳ್ ಶಾಂತವೀರೇಶ ವಿಶ್ವೇಶ ೫

## ೧೪. ದಂಡಿಸದೆ ಬಿಡನು

*ರಾಗ: ಪಂತುವರಾಳಿ*

ದೋಷ ಬಿಡದು ನಿನ್ನ ದ್ರೋಹಿ ಹೋಲತಿ ಭಾಗ್ಯ
ನಾಶಮೂಳಿ ಬಲುಗಯ್ಯಾಳಿ
ಈಶ ಕವೀಶರುಪವಾಸವಾಗಿರಿಸಿದ ಹೇ ತೊತ್ತ ಹೇಸರಗತ್ತೆ ॥ ಪಲ್ಲ ॥

ಕಂಡು ಜಂಗಮಕೆರಗದೆ ಕತ್ತ ತಿರುಹಿದ ಹೆಂಡಗುಡುಕಿ ಹೆಂಗಳೊಳು ಕೆಡಕಿ
ಗಂಡನುಲ್ಲಂಘಿಸಿ ಮಿಂಡಗಾರನ ಕೂಡಿಕೊಂಡ ಜಾರೆ ಜಗಕತಿ ಕ್ರೂರೆ
ಖಂಡೇಂದುಧರನಣುಗರನುದಾಸೀನವಾಗಿ ಕಂಡ ಮೂಳಿ ಕಳ್ಳಕೂಟ ಬಾಳಿ
ರಂಡೆ ದಟ್ಟಡಿ ನಿನ್ನ ರವಿಶಶಿಯುಳ್ಳನ್ನ ದಂಡಧರನು ದಂಡಿಸದೆ ಬಿಡನು ೧

ಬಳಲಿ ಜಂಗಮ ಬಂದು ಕುಳಿತಿರೆ ನುಡಿಸದ ಕಲಹಕಾರೆ ಕಾರುಣ್ಯದೂರೆ
ಮಲಹರಾರ್ಚನೆಯ ಮಾಡಿಸೆ ಪುಣ್ಯವೆನ್ನದ ಕುಲಹೀನೆ ಕುಂಭಿನಿಗೆ ದೀನೆ
ಗಳಿಗೆ ಎಂಟರ ಮೇಲೆ ನೀರ ತಾರನೆ (ಮ)ನೆಯೊಳು ಸುಮ್ಮನೆ ಮಲಗಿದೆ ಗಮ್ಮನೆ
ಬಲುಬಡತನ ಕತ್ತಲೆ ಮನೆಯೆನಗೆಂದ ಸುಳುಹುಗಾತಿ ಶುದ್ಧ ಕಲಕೇತಿ ೨

ಸಟೆಯ ದಾರಿದ್ರ್ಯವ ಸಲೆ ಉಂಟುಮಾಡಿಕೊಂಡ ಕುಟಿಲಗಾತಿ ಕುಹಕಿ ಖಿಲ್ಲ ಖೋಡಿ
ದಿಟವೆ ಮಿಂಡರು ತಂಗಳುಂಬರೆಂಬ ಮಾತು ಕಟಕಿ ಕಲಹೆ ಕಚ್ಚುತಲಿಹೆ
ನಿಟಿಲಾಕ್ಷನ ಭಕ್ತಿ ನಿನಗೆ ಘಟಿಸದಟಮಟವಂತೆ ಅತ್ಯಂತ ಭ್ರಾಂತೆ
ನಿಟಿಲನ ನೆರಿಲೆನೆ ನೆಗ್ಗಿ ನಿನ್ನನು ಯಮ ಕಟಕಿಯಾಡುವ ಕಲ್ಲಿನಲ್ಲಿಡುವ ೩
೩

## ೧೫. ಕಾಯೋ ಕಾಮಾಂತಕ

*ರಾಗ: ಬಿಲಹರಿ*

ಕಯ್ಯ ಮುಗಿವೆ ದಮ್ಮಯ್ಯ ದಯವಿರ
ಲಯ್ಯಯೆನ್ನ ಮೇಲೆ ॥ ಪಲ್ಲ ॥

ಹಿಂದೆಯಜ್ಞಾನದಿಂದ ಭವಗಳೊಳು
ಬಂದೆನರಿಯದಾನು ಸಂಸಾರ
ದಿಂದೆ ನಿಮ್ಮ ಕೃಪೆ
ಯೆಂದಿಗೆನಗಹುದು ಏಣಾಂಕಜೂಟ ೧

ಕೆಟ್ಟೆ ನಿಮ್ಮಡಿಯ ಬಿಟ್ಟೆನನಗೇನು
ಬಟ್ಟೆ ಭಾವಜಾರಿ ಕಷ್ಟನೆನಿಸದೆ ಕರಣ
ದಟ್ಟುಳಿಯ ಬಿಡಿಸಿ ದಯಾ
ದೃಷ್ಟಿಯಿಂ ನೋಡು ದಾಕ್ಷಾಯಣೀಶ ೨

ಏಕೆಯೆನ್ನೊಳು ಪರಕೆ ಬಪ್ಪುದನು
ಬೇಕೆಂದು ಬೇಡಿಕೊಂಡೆನ ನಿಮ್ಮೊಳು
ನೀ ಕಳುಹಿ ಸಂಸಾರಾದ್ಯಕುಲಾಂಭೋನಿಧಿಗೆ
ನೂಕಬಹುದೆ ಕಾಯೋ ಕಾಮಾಂತಕ ೩

ಪುಟ್ಟಿ ಬಹುಭಂಗಪಟ್ಟೆ ಬಳಲಿ ಬಾಯಿ
ಬಿಟ್ಟೆ ಭಾವಜಾರಿ ಸಂಸಾರದಿ
ಇಟ್ಟೆ ಮೊರೆಗೇಳಿ ದಯ ಹುಟ್ಟಿ ಮಗ ಬಾರೆನ್ನ
ದಿಷ್ಟೇಕೆ ಮುನಿಸು ಮುಪ್ಪುರ ಸಂಹಾರ ೪

ಕಾಡಿ ನರರ ಕೊಂಡಾಡಿ ಬಾಯಿಬಿಟ್ಟು
ಬೇಡಿ ಬೆಂಡಾದೆ ನೋಡೊಡಲ ಹೊರೆಹೊತ್ತಿಹ
ಮೂಢನೆನ್ನೊಳವಗುಣವ
ನೋಡದೆ ಪೊರೆ ಪನ್ನಗೇಂದ್ರಕಟಕ ೫

ಎಂತು ನೀ ನಡೆಸಿದಂತೆ ನಡೆವ ಸ್ವ
ತಂತ್ರವಿಲ್ಲವಾಗಿ ಅಂತಕನ ಬಾಧೆ ವಿರ
ಹಿತವೆನ್ನುತಾಮ್ನಾಯ
ಸಂತತಿಗಳೊದರುತಿವೆ ಸರ್ವೇಶ್ವರ ೬

ತಪ್ಪುಯೆನ್ನಲಿಯಿಪ್ಪುದೆಣಿಸಲ್ಕೆ
ಸರ್ಪಪತಿಗಳವಲ್ಲವೆನ್ನವಗುಣವ
ಅಪ್ಪ ನೋಡಿದೊಡೆ ಹುರುಳಿಲ್ಲ ನಿನ್ನವನೆನ್ನು
ತಪ್ಪಿಕೊಳ್ಳ್ಯ ಶಾಂತವೀರೇಶ್ವರ ೭

## ೧೬. ಶರಣು ಶಾಂತವೀರೇಶ

ಶರಣು ಶರಣು ಶಾಂತವೀರೇಶ ಜಿತ
ಮರಣ ಕರುಣ ಕಿರಣ ಶಾಂತವೀರೇಶ ॥ ಪಲ್ಲ

ಶೂರ ಮಾರದೂರ ಶಾಂತವೀರೇಶ ಪುಣ್ಯ
ಸಾರಪೂರುದಾರ ಶಾಂತವೀರೇಶ
ಸೂರಿವೈರಿ (ಕಾಮನೊಯಿ)ರಿ ಶಾಂತವೀರೇಶ ಸತ್ಯೋ
ದ್ಧಾರಗಾರಗಾರ ಶಾಂತವೀರೇಶ ೧

...........ಚಿದ್ವಿ
ಲಾಸ ದೋಷನಾಶ ಶಾಂತವೀರೇಶ
ವಾಸರೇಶ ವೇಷ ಶಾಂತವೀರೇಶ ಸುಕೃತ
ಕೋಶ ರೋಷ ದೋಷ ಶಾಂತವೀರೇಶ ೨

ದಕ್ಷ ದಕ್ಷ ಶಿಕ್ಷ ಶಾಂತವೀರೇಶ ವಿಷ
ಭಕ್ಷ ಯಕ್ಷರಕ್ಷ ಶಾಂತವೀರೇಶ
ಸುಕ್ಷೇತ್ರ ತ್ರಿಲಕ್ಷ ಶಾಂತವೀರೇಶ ಎನ್ನ
ನೀಕ್ಷಿಸಯ್ಯ ತ್ರ್ಯಕ್ಷ ಶಾಂತವೀರೇಶ ೩

## ೧೭. ಸೋಜಿಗವನು ಕೇಳು

*ರಾಗ: ಕನ್ನಡ ಕಾಂಬೋಧಿ*

ಸ್ವಾತಿಯ ಮಳೆ ಹುಯ್ದು ಸೋಜಿಗವನು ಕೇಳು
ನೀ ತಳುವದೆ ಸೋಸಲೆಯ ಕೆಂಪನಂಜೇಶ ॥ ಪಲ್ಲ ॥

ಅಗಲಲೀಸದೆ ಪಾಳಿನ ಕಿರಣಂಗಳು
ಹಗಲು ಕತ್ತಲೆ ಮುಸುಕಿತೋ ನೋಡಲು ಬಂತೆ
ಮುಗಿಲೆದ್ದು ಕವಿದಂಟುದೆಸೆಯ ತೆಕ್ಕನೆ ತೀಡಿ

ಮುಗಿಲ್ಧ್ವನಿ ಗುಡುಗುಡು ಜಡಿಯಿಂದಾರ್ಭಟಿಸಲ್ಕೆ
ಮುಗಿಲ್ಪೇಣಗ್ಯೆಯಲು ಚಂಡಮಾರುತ ಮಹಾ
ನಗವ ಕಿಳ್ತ್ತೀಡಾಡಲು ಕಾಡಿನ
ಖಗಮ್ರುಗವೆಲ್ಲ ಕಂಗೆಡಲು ಕರೆಯೆ ಮಳೆ
ಮುಗಿಲು ಹ.... ಗದ ಬೀಳುತೆಲ್ಲಿ ನೋಡಲು ೧

ಕಾರಮುಗಿಲ್ವೆರಸಂಗಜಸಂಹಾರಕ್ಕೆ ಮು
ನ್ನೀರ ಕಳುಪಿದೊಲು... ದುಗತ್ರ ಮುಖ ಜಂ
ಭೀರ ಪಣ್ಣನಂತಿಹ.... ಧರಣಿ..... ಯ..... ಲೆ
ಭೋರೆಂದು ಕರಯೆ ಬೆರೆತುಕೊಂಡು ಮಿಗವಕ್ಕಿ
ಸೇರಲಿಕ್ಕೆಗಳಿಲ್ಲದೆ ಪಲುಬಲ್ಕೆ ಹೊನ್ನೀರು ಹಾಯ್ದು
.............ದಿ............. ಮರಗಳು
ಬೇರು ಕೀಳುತಲುಗ್ರದಿ ಕೌಂಡಲಿ ಭೃಗು
ಚಾರುನದಿಯು ಮೇರೆದಪ್ಪಲು ಶೀಘ್ರದಿ ೨

ಎಕ್ಕಲನೆರಳೆಯು ಕಾಳ್ಗೋಣ ಭಲ್ಲುಕ ಪುಲಿ
ಸೊಕ್ಕಿದಾನೆಯು ಕಾಡಕುಕ್ಕರ ಶಶಕನು
ಮರ್ಕಟ ವಂಚಕ ಮಾರ್ಜಾಲ ಪುಣಗಿನ
ಬೆಕ್ಕು ಜವಾದಿಯಮಿಗವಶ್ವ ಪಶು ಮೇಷ
ಮಿಕ್ಕ ನಾನಾ ಪಕ್ಷಿ ಮನುಜರು ನೀರೊಳು ಸಿಕ್ಕಿ
ಒಕ್ಕಡೆ ಬರೆ ಪ್ರಾಣವ ಬಿಟ್ಟು
ಕರ್ಕಣಂ........... ಕಂಡು
ದುಃಖಾಂಬುಧಿಯೊಳಖಿಳ ಜನ ಮುಳುಗೆ ೩

ಊರೂರು ಮನುಜರೊಕ್ಕಲ ತೆಗೆದೋಡಲು
ಭೋರೆಂದು ಕೌಂಡಲಿ ತರಂಗಿಣಿ
ಮೇರೆದಪ್ಪುತ ಮಿಗಿಲ್ಕೆತಂದು ಗೋದುವೆ
ಸಾರ ಕಳವೆ ರಾಗಿ ಮುಂತಾದ ಮದೆಗಳ
ತೂರಿಪೋಗಲನಾಥರು ಕಣ್ಗೆಟ್ಟೆವು ಉಂಬರೆ ಏನಿಲ್ಲ
ಭೂರಿಹಣವ ಕೊಟ್ಟೆವು ಕಂಗೆಟ್ಟೆವು
ಧಾರುಣಿಯೊಳು ನಾವು ೪

ಈ ಪರಿ ಕೌಂಡಲಿ ಭೃಗುನದಿ ದ್ವಿತಿಯು ಮ
ಹಾ ಪರಿ..... ಸಮಸ್ತ ಲೋಕಕಥೆಯ ಸೋಸಲೆಯ ದ

ಯಾಪರ ಕೆಂಪನಂಜೇಶನೊಡನೆ ಸ
ಲ್ಲಾಪದಿಂ ಶಾಂತಯ್ಯ ಪೇಳ್ದನಾಲಿಪುದು ಮಳೆಹೊಯ್ದು
ತಾಪತ್ರಯವು ಬಂತಲ್ಲ ಶಾಂತವೀರೇಶ
ತಾ ಪಿರಿದೊಡ್ಡಿದ ಸೂತ್ರವಿದಲ್ಲ ೫

## ೧೮. ಶಿವಯೆನ್ನು ಮನವೆ

*ರಾಗ: ಸಾಳಂಗ ನಾಟಿ*

ಪಾಡುತ ಪ್ರಮಥರ ನೋಡುತ ಲಿಂಗವ
ಮಾಡು ಮದ್ಗುರುಚರಭಕ್ತಿಯ ಮನವೆ ॥ ಪಲ್ಲ ॥

ಬಸವೇಶ ಮೊದಲಾದ ಶಶಿಧರ ಕಡೆಯಾದ
ಅಸಮಗಣಂಗಳಡಿಯ ಬಿಡದೆ
ಬಸವ ಬಸವ ಬಸವಯೆಂದು
ಒಸೆದೀಗ ಓಂ ನಮಃ ಶಿವಯೆನ್ನು ಮನವೆ ೧

ಜಲವು ಗಂಧಾಕ್ಷತೆ ಫಲಪುಷ್ಪಗಳಿಂದ
ಸಲುವ ಧೂಪವು ದೀಪ ನೈವೇದ್ಯವ
ಮಲಹರಗರ್ಪಿಸಿ ಒಲಿದು ತಾಂಬುಲವಿತ್ತು
ಸುಲಲಿತ ಲಿಂಗವ ನೆನೆ ಕಂಡ್ಯ ಮನವೆ ೨

ಧರೆಯೊಳು ದಂಡಪ್ರಣತನಾಗಿ ಗುರುವಿಗೆ
ಶರಿರರ್ಥಪ್ರಾಣವ ಸಲಿಸುತಲಿ
ಮರೆಯದೆ ಮದ್ಗುರು ಚರಣವ ಭಜಿಸಲು
ಪರಿಭವ ನಿನಗಿಲ್ಲ ನೆರೆ ನಂಬು ಮನವೆ ೩

ಜನನ ಮರಣಸ್ಥಿತಿ ಶೇಷಯಿಲ್ಲದಿರುತಿಹ
ಅನಘ ಜಂಗಮದಡಿದಾವರೆಯ
ಮನದೊಳಗಿಂಬಿಟ್ಟು ನೆನವುತಿರಲು ಕಾಮ
ದನುವ ಬಿಸುಟು ದಾಸನಾಗು ಮನವೆ ೪

ಹರಗುರುಚರಭಕ್ತ ಶರಣರ ಪಾದದ
ಕೆರಹ ಹಿಡಿದುಕೊಂಡಿರುತಿರ್ದಡೆ
ವರ ಗುರು ತೋಂಟದ ಸಿದ್ಧಲಿಂಗನು ನಿನ್ನ
ಶರಿರವ ಸಾಕುಮಾಡುವ ಕಂಡ್ಯ ಮನವೆ ೫

## ೧೯. ಮನವೆ ಸೋಲದಿರು

ಮನವ ಸೋಲದಿರು ಬಾಲೆಯರ ಜಾಲಕ್ಕೆ
ಜಲಚರ ಮರುಳು ಮಾಂಸದ ಸವಿಗೆ ಮಚ್ಚಿ ಮನವೆ
ಕೋಲ ನೂಲಿನ ತುದಿಯ ಮಲ್ಲು ಕೊಂಕಿಯ ನುಂಗಿ
ಅಲ್ಲಿ ಪರಿವಂತಹುದೆಲೆ ಮನವೆ ॥ ಪಲ್ಲ ॥

ಸಾರಿ ಮರುಕುಟಿಲವನು ಆರು ಬಲ್ಲವರಿಲ್ಲ
ಮಾರಾರಿಗೊಮ್ಮೆ ಅಸದಳವು ಮನವೆ
ನೀರೆಯರು ನಿನ್ನನುಪಚರಿಸಿ ನಿಲಿಸಿಕೊಂಡು
ತೋರುವರು ತಮ್ಮ ತನುಗಲೆಯ ಮನವೆ
ಸಾರಿ ಚರಣವ ಪಿಡಿದು ವಾರಿಯಲಿ ತೊಳೆದುಟ್ಟು
ಸೀರೆಯನ್ನಿತವನು ತೊಡೆದು ಮನವೆ
ಭಾರಿಮಂಚದ ಮೇಲೆ ಕುಳ್ಳಿರಿಸಿ ಜಾರೆಯರು
ಆರೈದು ಊಟವಿಕ್ಕುವರು ಮನವೆ ೧

ಕಣ್ಣೀರ್ಗಚ್ಚಿ ತಮ್ಮ ಶಿವದ ಸಣ್ಣಕ್ಕಿವಾಗರವ
ಬೆಣ್ಣೆಗಾಸಿದ ತುಪ್ಪಗಳನು ಮನವೆ
ಅಣ್ಣೆವಾಲೆರದು ಬಾಳೆಯ ಹಣ್ಣು ಸಕ್ಕರೆಯ
ಹಣ್ಣುಗಳು ನೀಡಿ ಉಣ್ಣೆಪರು
ಸಣ್ಣ ಬೆವರಿಡುತಿರಲು ತಮ್ಮುರದ ಸೆರಗೆ ತೆಗೆದೊರಸಿ
ಬಣ್ಣೆಸುತ ಬಡವಾದಿರುಣರೊಲ್ಪಿರಿಯಿಗೆ
ಕಣ್ಣಾರೆ ಕಾಣವೆನುತಿಹರು ಮನವೆ ೨

ತೊಳೆದ ಬಿಳಿಯೆಲೆ ಕಳಿಯಡಕೆ ಕೆನೆಸುಣ್ಣವನು
ಬಳೆಯ ಕೈಯೊಳು ಪಿಡಿದು ನಿಂದು ಮನವೆ
ಗಳಿಗಳಿಗೆಯನು ಮಾಡಿ ಬಳಿಬಳಿಗೆ ಬಂದಾಗ
ನಳಿತೋಳನೆತ್ತಿ ಕೊಡುತಿಹರು ಮನವೆ ೩

ನಿರಿಯ ಪಸರಿಸಿ ಉಬ್ಬುತುರುಬ ನೆವದಿಂ ಬಿಟ್ಟು
ಕರವೆರಡನೆತ್ತಿ ಕಟ್ಟುತಲಿ ಮನವೆ
ಅರಮೆಯ್ಯ ತೆರವುತ್ತ ಶರಿರವನು ಸೋಂಕಿಪ ರೂಪು
ಪರಿಮಳವ ಧರಿಸುವಂದದಲಿ
ನೆರೆ ನೆಚ್ಚುವಂದದಲಿ ಸೆರಗ ಮರಸುತ್ತ ಮುಖವ

ಕಿರಿಗಣ್ಣಿನಲಿ ನೋಡುವಾಗ ಮನವೆ
ಕರಚರಣಗಳನೊತ್ತಿ ಒರೆಸಿ ಮೋಹವ ಮಾಳ್ಪ
ತೆರನೆಂದು ಅರಿ ನೀನು ಘನವೆ ೪

ಸತಿಯರೀ ಪರಿಯಲ್ಲಿ ಅತಿಶಯಮಾದ ಭಕ್ತಿಯನು
ಕೃತಕದಿಂದಲಿ ಮಾಡುತಿಹರು ಮನವೆ
ಹಿತವೆಂದು ನಂಬದಿರು ರತಿಪತಿಯ ಬಾಣದಲಿ
ಹತಮಾಡುವರು ನಿನ್ನ ಮತಿಯ ಮನವೆ
ಶತಪಾತಕ ಮುಂದೆ ಯತಿತನಕೆ ಭಂಗವೆಂದು
ಅತಿಗಳೆದು ಮಾಯಾಮೋಹವನು ಮನವೆ
ಸಿತಕಂಠ ಸಿದ್ಧಲಿಂಗೇಶ್ವರನಂ ಪಾದಾನು
ಗತನಾಗಿ ನುತಿಸುತಲಿ ಮನವೆ ೫

## ೨೦. ಗುರುವೆ ಶರಣು

ಕರಕಮಲದೊಳಗಿಪ್ಪ ಇಷ್ಟಬ್ರಹ್ಮವೆ ಪ್ರಣವ
ದಿರವಾದ ಭೇದವನು ಸ್ವಾನುಭಾವದಿ ನೋಡಿ
ಶರಣಸಂಕುಳಕೆಲ್ಲವೊರೆದ ಶ್ರೀಗುರುಮೂರ್ತಿ ಶರಣು ನಿಮ್ಮಯ ಚರಣಕೆ ॥ ಪಲ್ಲ ॥

ಮೇಲೆ ಗೋಳಕವೆ ಪ್ರಣಮವು ಯಕಾರವೆ ನಾಳ
ಕೀಲಿಸಿದ ಗೋಮುಖನೆ ಘನ ವಕಾರದ ಮಂತ್ರ
ಲೀಲೆಯಿಂದೊರ್ತುಳ ಶಿಕಾರವೆ ಮಧ್ಯಮಕಾರ ಮೂಲವೃತ್ತವೆ ನಕಾರಂ
ಪಾಲಿಸಿದ ಬೀಜಾಕ್ಷರವೆ ಇಷ್ಟರೂಪಾಗಿ
ಬಾಲರವಿ ಶಶಿ ಮಿಂಚು ಪುಳುಕು ಮೌಕ್ತಿಕರತ್ನ
ಜಾಲಜ್ಯೋತಿಯ ಬೆಳಗನೊಳಕೊಂಡ ಶೂಲಿಯನು ತೋರಿಸಿದ ಗುರುವೆ ಶರಣು ೧

ದಶಚತುರ್ವರ್ಣ ಗೋಳಕದಿ ನಾಳದೊಳು ಷೋ
ಡಶವರ್ಣ ಗೋಮುಖಸ್ಥಲದಿ ದ್ವಾದಶವರ್ಣ
ದಶವರ್ಣ ವರ್ತುಳದಿ ಮಧ್ಯವೆಳಗಾಬು ನಾಲ್ಕೆಸೆವ ವರ್ಣವು ವೃತ್ತದಿ
ಪಸರಿಸುವ ಶ್ರುತಿಶಾಸ್ತ್ರ ಪೌರಾಣ ಆಗಮಕೆ
ವಶವಲ್ಲದಿಹ ಅತ್ಯತಿಷ್ಠದ್ದಶಾಂಗುಲದ
ಅಸಮಪ್ರಣಮವ ಇಷ್ಟರೂಪಾಗಿ ಕಾಣಿಸಿದೆ ಸಸಿನೆ ಗುರುವರನೆ ಶರಣು ೨

ಆರು ಸಾದಾಖ್ಯಾರು ಕಲೆಯಾದಿ ಜನನಕ್ಕೆ
ಆರು ವೇದಗಳಾರು ಅರ್ಥಗಳ ಜನನಕ್ಕೆ
ಆರು ವದನಗಳಾರು ಬ್ರಹ್ಮಗಳ ಜನನಕ್ಕೆ ಆರು ಅಧಿದೈವಗಳಿಗೆ
ಆರು ಭೂತಗಳಾರು ಚಕ್ರದಳ ಜನನಕ್ಕೆ
ಆರು ತತ್ವಗಳಾರು ಹಸ್ತಗಳ ಜನನಕ್ಕೆ
ಆರು ಶಕ್ತಿಗಳಾರು ಭಕ್ತಿಗಳುವಿಷ್ಟದೊಳು ತೋರಿಸಿದ ಗುರುವೆ ಶರಣು ೩

ಶಿವಲೋಕ ಮೊದಲಾದ ನವಸ್ಥಾನಕಾದಿಯಿದು
ನವಲಿಂಗ ನವಭಕ್ತಿ ನವನಾದಕಾದಿಯಿದು
ನವಶಕ್ತಿ ನವಬಿಂದು ನವತೇಜಕಾದಿಯಿದು ಅವಿರಳನುಭವದಾದಿಯು
ನವಪ್ರಣವ ಶತಯೇಕಸ್ಥಲಗಳಿಗೆ ಆದಿಯಿದು
ನವಮಂತ್ರ ನವಜಪಂ ನವಪೂಜೆಗಾದಿಯಿದು
ಸವಿಕಲ್ಪ ನಿರ್ವಿಕಲ್ಪ ತತ್ವಕಾದಿಯಿದೆಂದು ವಿವರಿಸಿದ ಗುರುವೆ ಶರಣು ೪

ಇನ್ನೂರ ಹದಿನಾರು ಲಿಂಗಗೋಳಕದಿ ಮಹ
ದುನ್ನತದ ಛತ್ತೀಸಲಿಂಗನಾಳದೊಳು ಮಿಗೆ
ಸನ್ನುತದ ಅಷ್ಟದಶಲಿಂಗಗೋಮುಖನಲ್ಲಿ ತವಲಿಂಗ  ವರ್ತುಳದೊಳು
ಅನ್ವಯವೆ ತಿಳಿಯೆ ಷಡ್ವಿಧಲಿಂಗಮಧ್ಯದೊಳು
ಮನ್ನಣೆಯ ತ್ರೈವಿಧ(ದ)ಲಿಂಗವೃತ್ತದೊಳೆಂದು
ಭಿನ್ನವಿಲ್ಲದೆ ಇಷ್ಟದೊಳ್ ಸರ್ವವರುಹಿದನ್ನಾಳ್ದ ಸಿದ್ಧಪ್ರಭುವೆ ೫

## ೨೧. ಕರೆತಾರೆ ಕಾಂತನ

ಕರೆತಾರೆ ನೀರೆ ಕಾಂತನ ಬೇಗ ಕರೆತಾರೆ ನೀರೆ
ಕರೆತಾರೆ ಕಾಂತನ ಮರೆತು ಮಲಗಲಾರೆ ||ಪಲ್ಲ||

ಮರೆತ ವೈಯಾರಿ ಗಂಡ ರೇವಣಸಿದ್ಧನ
ಕೊಲ್ಲಿಪಾಕಿಯಲಿ ಹುಟ್ಟಿ
ಕೊಲ್ಲಾಪುರದ ದೈತ್ಯರನೆಲ್ಲ ಸದದು
ಸಿಂಗಿಯ ವಿಷವ ಕೈಕೊಂಡ ದೇವನ ೧

ಗೋಸಲಮಠದೊಳಗೆ ಚನ್ನಬಸವೇಶಗೆ
ಮೀಸಲನ್ನವನುಣಿಸಿ
ದೇಶದೇಶದಲಿ ವಾದವ ಗೆಲುವಂಥ ಸರ್ಪ
ಭೂಷಣ ಶಿವ ಸಿದ್ಧಲಿಂಗೇಶ ೨

## ೨೨. ಮಹಿಮಪುರುಷನಾಗೆಲಾ

ನಂಬಬೇಡ ಮನುಜದೇಹ ನಂಬಿ ಕೆಡುವೆಲಾ
ಶಂಭುಗುರುವಿನಾಜ್ಞ ಹಿಡಿದು ತಿಳಿದು ನೋಡೆಲಾ ॥ ಪಲ್ಲ ॥

ಹಲವುಜನ್ಮದೊಳಗ ಬಂದು ಬಳಲಿದೊಯೆಲಾ
ತಲೆಯು ಹುಳಿತ ಶ್ವಾನನಂತೆ ತಿರುಗಿದೊಯೆಲಾ
ತಿಳಿಯದ್ಹೋದ ಭವದ ಲತೆಯ ಕಳೆಯಲಿಲ್ಲಲಾ
ಬಲು ಬಣ್ಣ ವಸ್ತ್ರಕಾಂತೆ ನಂಬಬೇಡೆಲಾ ೧

ಎಲವು ತೊಗಲು ರಕ್ತ ಮಾಂಸ ಕಲಸಿ ಮುದ್ದೆಲಾ
ಬಳಸಿ ನರವು ಕೀಲುಯಿದಕೆ ಜಡಿಸದೊಮ್ಮೆಲಾ
ಹೊಲಸು ನಾರೂ ಕೊಂಡದೊಳಗೆ ಮುಳುಗಬ್ಯಾಡೆಲಾ
ಮನಸಿಜಾಂತಕನರಿದು ಮಹಿಮಪುರುಷನಾಗೆಲಾ ೨

ತನುವು ಧನವು ಮನೆಯು ಮಕ್ಕಳು ನಿನ್ನದೇನೆಲಾ
ಕನಸಿನೊಳಗೆ ಕಂಡ ತೆರದಿ ಜನಿಸಿತೊಯೆಲಾ
ನೆನಸಿ ನೆನಸಿ ನಡುವೆ ನೀನು ಬಡವನಾದೆಲಾ
ಮನಸಿನೊಳಗೆ ಮಹಾದೇವನನ್ನು ನೆನೆಯಲಾ ೩

ಮುಟ್ಟಿನೊಳಗೆ ಹುಟ್ಟಿ ನೀನು ಮುಟ್ಟಿಯೆಂದೆಲಾ
ಮುಟ್ಟಿ ಗರಿಯು ಗಟ್ಟಿಪಿಂಡ ಪುಟ್ಟಿತೊಯೆಲಾ
ಇಷ್ಟರಿಂದ ತಿಳಿದು ಇದರ ಬಟ್ಟೆ ಬಿಡುಯೆಲಾ
ಇಷ್ಟಲಿಂಗದೊಳಗೆ ದೃಷ್ಟಿಯಿಟ್ಟು ಕೂಡೆಲಾ ೪

ಆರನಳಿದು ಮೂರ ಜರಿದು ಮಾರಿಕೊಂಡೆಲಾ
ಸಾರುತಲೆ ಏಳುಯೆಂಟು ದೂರು ಮಾಡೆಲಾ
ಕಾರುಕಟ್ಟಿನೊಳಗೆ ರೂಪು ಕಾಣುತಾದೆಲಾ
ಧೀರ ತೋಂಟದವೀರನೊಳಗೆ ಬೆರೆದು ಕೂಡೆಲಾ ೫

## ೨೩. ಶರಣರ ಸೊಲ್ಲು ಕೇಳೊ

ಶರಣರ ಸೊಲ್ಲು ಕೇಳೊ ಮನವೆ
ಗುರುಚರಣವನು ಪಿಡಿದು ॥ ಪಲ್ಲ ॥

ಉರಿವನಲವದೆಸೆದು ದ್ವಾರಮಾಲೆಯ ನಡೆಸುತ
ರಸಗಂಧಶಬ್ದಕೇಳಿಯ ಸೊಗಸಿನಾಗಮಕಲೆಯ
ಸಸಿನೆ ಕೊಡುತಿದಾ ಬಿಲ್ವದಲ್ಲಿ
ಮಿಸುಪ ಲಿಂಗವನು ಕುಶಲದ ಊರ್ಧ್ವಲೋಚನೆಯ ೧

ಅಧಿಕವಾದಾಸನವ ಬಲಿದು ಕೆದರಿ ಅಗ್ಗನಿಯನು
ಗುದುಕು ಚರಣಸಖಿದ್ವಾರದಲ್ಲಿ ಮುರಿದು ಬೆರಳಿನಲ್ಲಿ
ಸದ್ವಿನಯದಿಂದಲಿ ತದ್ವರನೊತ್ತುತ
ಸದಮಲಲಿಂಗದ ಕಿರಣವ ನೋಡುತ ೨
ಮನದ ಬಿಂದು ನಿಲವನು ಬಲಿದು
ಉನ್ಮನಿಯಲಿರುವ ಚಿನ್ಮಯಬ್ರಹ್ಮಕರಿ
ವಿನಾಯೆನ್ನರಿವನಲ್ಲಿ ಮುನಿವುತಲಿ
ಸನುಮತ ಶಾಂಭವಿಯಲ್ಲಿರುತ ೩

ಶರಧಿಯಂಬುಜ ಮಧ್ಯದಲ್ಲಿ
ಗುರು ಮುಕ್ತಿ ಬೀಜ ಪರನಾದಬಿಂದುಗಳ ಕೂಡಿ
ಬೆಳಗುವ ಕೋಟಿಸೂರ್ಯಚಂದ್ರನ
ಕಿರಣದ ಮೊತ್ತದ ಪ್ರಭೆಗಳ ಬೆಳಗುವ ಮಿರುಗುತ ೪

ಕಂಡುನ್ಮನಿಯಲ್ಲಿ.ರುವ ಅ
ಖಂಡ ತೋಂಟದದೇಶಿಕನ ರುಂಡಮಾಲೆಯೆ ಆದ
ತಂಡತಂಡದ ಪ್ರಮಥರ ಪಾದುಕೆಯ
ಮಂಡೆಯೊಳಿಟ್ಟು ನಲಿದಾಡುತಲಿ ೫

## ೨೪. ಜ್ಯೋತಿ ಬೆಳಗುತಿದೆ

ದೀಪ್ತಿಯಾಗಿರುತಿಹ ಜ್ಯೋತಿ ಬೆಳಗುತಿದೆ
ಕಾಣಬಾರದ ಕಣ್ಣಿಗೆ ಕಂಡೆನೆಂದರೆ
ಕಾಣಿಸದು ಏನಮ್ಮ ॥ ಪಲ್ಲ ॥

ಕರಮನಭಾವದಿ ಪರಿಪೂರ್ಣದೊಳಿಹ
ದರಿದೆ ಮಾಡುವದಾವ ವಿನೋದವ
ಪರಿಪರಿವಿಧದರ್ಚನೆಯಂ ಮಾಡುತ
ಕುರುಹರಿಯದ ಕುರುಡಗೆ ಕಾಣೆಪುದೆ ೧

ಯೋಗವಿಯೋಗವ ಮಾಡುತ ಮನದಲಿ
ಆಗಮದರ್ಥವ ಹೇಳುತ ಘನದಲಿ
ತಾರಕ ತತ್ವ ಪ್ರಣಮವ ತೋರುವ ಪಶು
ಪಾಮರಗಿದು ಕಾಣೆಪುದೆ ೨

ತಾರಕತತ್ವವ ತೋರಿದುದೀಕ್ಷಣ
ತಾನರಿಯದೆ ಮತ್ತೆಲ್ಲ
ತೀಕ್ಷಣ ತಾನೇ ತಾನು ಅಖಂಡ ಮ
ಹಾ ಘನಶಾಂತ ಫಕೀರನೆ ತಾನೆ ಬಲ್ಲ ೩

## ೨೫. ಭಜನೆಯ ಮಾಡಬಾರದೆ

ಕೈಲಾಸವಾಸನ ಭಜನೆಯ ಮಾಡಬಾರದೆ ॥ ಪಲ್ಲ ॥

ಅಕ್ಷಯಫಲದ ವಿಚಕ್ಷಣನೆನಿಸುವ
ಮೋಕ್ಷವೀವ ನಿಟಿಲಾಕ್ಷನ । ಭಜನೆಯ ಮಾಡಬಾರದೆ ೧

ಬಾರಿಬಾರಿಗೆ ಹರನೆಂಬುವ ಮನುಜರ
ಘೋರ ದುರಿತ ಪರಿಹರಿಸುವನ । ಭಜನೆಯ ಮಾಡಬಾರದೆ ೨

ಕಮಲಾಪತಿ ನಯನಾರ್ಚನೆ ಮಾಡಿದ
ಕ್ರಮವನರಿತು ಕಾಮಾರಿಯ । ಭಜನೆಯ ಮಾಡಬಾರದೆ ೩

ಕಪ್ಪುಗೊರಳನನು ತಪ್ಪದೆ ನೆನೆವರ
ಒಪ್ಪದಿಂದಯೆನ್ನಪ್ಪನ । ಭಜನೆಯ ಮಾಡಬಾರದೆ ೪

ಚೆಲುವೆ ಚಾಮುಂಡಿಯ ರಮಣನ ಚರಣವ
ಒಲುಮೆಯಿಂದ ಒಮ್ಮನದಲಿ । ಭಜನೆಯ ಮಾಡಬಾರದೆ ೫

## ೨೬. ಹೋಗೋಣ ಬಾರೆ

ತಂಗಿ ಹೋಗೋಣ ಬಾರಮ್ಮ ತಯಾರಾಗಮ್ಮ
ತಂಗಿ ಹೋಗೋಣ ಬಾರಮ್ಮ
ತಂಗಿ ಹೋಗೋಣ ಬಾರೆ ತಡವು ಮಾಡಲಿಬ್ಯಾಡ
ಕಂಗಳ ಮಧ್ಯದಲಿ ಮಹಾಲಿಂಗನ ಕೂಡುವುದಕ್ಕೆ ॥ ಪಲ್ಲ ॥

ಮಿಂದು ಮಡಿಯನುಡಬೇಕೆ
ಚಂದುಳ್ಳದೊಂದು ಡಾಬನಿಡಬೇಕೆ
ಗಂಧ ಕಸ್ತೂರಿಬಟ್ಟು ಗಮಕದಿಂದಲಿಯಿಟ್ಟು
ಕುಂದಣದ ಮೂಗುತಿಯಿಟ್ಟು ಕೂಡಿ ಇಬ್ಬರೊಂದಾಗಿ ೧

ನಾನು ನೀನೆಂಬೋದ ಬಿಡಬೇಕೆ
ನೀ ನಿಜವ ತಿಳಿಬೇಕೆ ನಾ ಸತ್ತು
ನೀನೆ ಇರಬೇಕೆ ತಾನೆ ತಾನಾದ ಬಳಿಕ
ಮಾನವರಂಜಿಕಿನ್ಯಾಕೆ ಆನಂದಸ್ಥಲದಲಿ ಮಹಾಲಿಂಗನ ಕೂಡುವೆನು ೨

ಧರೆಯೊಳು ಕರಿವೃಷಭೇಂದ್ರನ
ಕರವ ಪಿಡಿದನೆ ಪರಿಪರಿ ಬೋಧೆ ಹೇಳಿದನ
ಪರಮ ಆನಂದದ ಸುಖದ ದ್ವಾರ ತೋರಿದನಲ್ಲ
ತಿರುಗಿಬಾರದ ದಾರಿ ಪರಿಯ ತೋರಿದನಲ್ಲ ೩

## ೨೭. ಸನ್ನೆ ಮಾಡಿ ಪೋದ

ರಾಜಮುಖಿಯೆ ಕರೆದು ತಾರ
ರಾಚೋಟಿ ಪ್ರಭುದೇವನ ರಾಜರುಷಿತೇಜನ ॥ ಪಲ್ಲ

ಬಾಲೆಯೆನ್ನ ಸ್ವಪ್ನದಲ್ಲಿ
ಭಾವಜಹರ ಬಂದನು
ಬಾಯಮಾತ ಪೇಳಿಯೆನಗೆ
ಭ್ರಾಂತುಪುಟ್ಟಿಸಿ ಪೋದನು ೧

ಕಕ್ಕಸಕುಚಕೆ ಕೈಯ
ನಿಕ್ಕದೆ ತಾ ಪೋದನು

ಚಿಕ್ಕವಳು ಇವಳೆಂದು
ಗಕ್ಕನೆದ್ದು ಪೋದನು ೨

ರಮಣಿ ಕೇಳೆ ನಾನು ಬೇಗ
ರಮಣನಲ್ಲಿಗೆ ಪೋದೆನು
ಸಮಯವಲ್ಲಯೆಂದುಯೆನಗೆ
ಸನ್ನೆ ಮಾಡಿ ಪೋದನು ೩
ಅರುಣಮಧ್ಯದೊಳಿಷ್ಟ ತೋರಿ
ಅರಿತುಕೋ ನೀನೆಂದನು
ಕುರುಹುನಲ್ಲಿ ಗುರುವು ಕೂಡಿ
ಅರಿತು ಅರಿಯದೆ ಇದ್ದನು ೪

ಧರೆಯೊಳಧಿಕ ಶಿವಗಂಗೆ
ರುದ್ರಮುನಿಕರಜಾತನ
ಕರುಣದಿಂದ ಕರಮುತಾರೆ
ಕಾಮಿತಾರ್ಥವನೀವನ ೫

## ೨೮. ಗುರುಸೇವೆಯ ಮಾಡೋ

ಮುಂದರಿತು ಗುರುಸೇವೆಯ ಮಾಡೋ ನೀ
ಹೊಂದ್ಹೋಗೋಕಾಲದೊಳಿಬ್ಬರಿಲ್ಲ ॥ ಪಲ್ಲ ॥

ಮದವೆಂಬೊ ಮಾಯೆಗೆ ಸಿಕ್ಕಿ
ನೀ ನರಳುವದ್ಯಾತಕೊ ಶರಿರವು ಸುಕ್ಕಿ
ಮಾಯದ ಸಂಸಾರಕಾಗಿ ನೀನು
ಮಾರನಬಾಧೆಗೆ ಮರುಳಾಗಿ ಪೋಗಿ
ಸ್ಥಿರವೆಂದು ಗುರುಪೂಜೆ ಮಾಡದೆ
ನಾಳೆ ಕಿಂಕರರ ಕೈಯೊಳು ಬಾಧೆಯ ಪಡದೆ ೧

ಬಾಲ್ಯದೊಳಗೆ ನಿಮ್ಮಂತಾದೆ
ಬರುವ ಯವ್ವನಕಾಲಕ್ಕೆ ಕಾಮನಬಾಧೆ
ಕೌಮಾರತನದೊಳು ಸಂಸಾರಚಿಂತೆ
ನೀ ವೃದ್ಧಾಪ್ಯಕದೊಳು ಗೂಬ್ಯಾಗಿ ಕುಂತೆ
ಯಮಭಟರ ಬಾಧೆ ಅಪಾರ
ನಿನ್ನರಿಯದೆ ಇತ್ತ ಸಳವಾಗ ಶಿವನಾಗಬಾರ ೨

ಸ್ಥಿರವೆಂದು ನಂಬಿದ್ದಿ ಕಾಯದಷ್ಟವ
ನೀರ ಮೇಲಣ ಗುಳ್ಳೆಯಂತೆ ತಿಳಿಯೊ
ಇದರಾಟ ಪರತತ್ವದೂ...(ಳ).... ಗಿ ನೊಡನಾತು
ಪರಮಪದವಿ ಪ್ರತ್ಯಕ್ಷ ನಿನ್ನೊಳು...(ನೋಡು)..
ಶ್ರೀಗುರು ನಮ್ಮ ಶಿವನೆಂಬೊ ಈಶನ ಬೇಡು ೩

## ೨೯. ಹ್ಯಾಗೆ ಒಪ್ಪಿದೆ

ಹ್ಯಾಗೆ ಒಪ್ಪಿದೆಯಮ್ಮ ಶಿವನ ದೊಡ್ಡ
ನಾಗಭೂಷಣ ವಿ...... ಶಂಕರನ ॥ ಪಲ್ಲ ॥

ಪುಲಿತೊಗಲುಡಿಗೆ ಉಟ್ಟವನ ತೋಯೀ
ತಲೆಗಳ ಸರಮಾಡಿ ಕೊರಳೊಳಿಟ್ಟವನ
ತಲೆ ಜಡೆಮುಡಿಗಟ್ಟಿದವನ ಇಂಥ
ಚೆಲುವುಳ್ಳ ಕಾಮನ ಸುಟ್ಟುಬಿಟ್ಟವನ ೧

ಹುಟ್ಟನಿಂ ಬಡಿಸಿಕೊಂಡಿಹನ ದೃಢ ಬಿಲ್ಲ
ಪೆಟ್ಟಿಗೆ ನೊಂದು ಚಿಂತೆಗೆಟ್ಟವನ ಮತ್ತೆ
ಕುಟ್ಟುವ ವನಿತೆಯಿಂ ಪೆಟ್ಟುತಿಂದವನ
ಮುಟ್ಟಬಾರದವರ ಹ.....ನ
ಕುಲಗೆ ಚೆನ್ನನ ಮನೆಯ ಅಂಬಲಿವುಣುತ ಹೊಟ್ಟೆಹೊರಕನ ೨

ಸುಡುಗಾಡು ಕಾದುಕೊಂಡಿಹನ ಅಲ್ಲಿ
ಹರಿವ ನಾಯ ತಂದು ಸು...ತ ಸುತ್ತುವನ
ತಲೆ ಓಡ ಪಿಡಿದುಕೊಂಡಿಹನ
ಎಲ್ಲಿ ನಿಲ್ಲ....ಂದುದೊ...ಢುವನಾ ೩

ಗಜಚರ್ಮಾಂಬರವ ಪೊದ್ದವನ ತನ್ನ
ಭಜಿಪರ ಮನೆಯ ಬಾಗಿಲ ಕಾಯ್ದುವನ
ಭುಜಗನ ವಿಷವ ಪೊದ್ದವನ ಎಲ್ಲ ನಿಲ್ಲ
....ಂಡೊರದಡಿವೆ ತಂದಹನ ೪

ಗುರುದ್ರೋಹವ ಮಾಡಿದನ ತನ್ನ
ಪಣೆಯೊಳು ಇಂಬಿಟ್ಟು ಮೆರೆವಂತ

ಹರನ ಎಲ್ಲಿಯು ಕಾಣೆನು ಶಿವನು ಓಡಿ
ಪರಿದೋಡಿ ತಾಯೊಳಡಗಿಕೊಂಡಿಹನ ೭

ಕಂದನ ಕೊಲ್ಲಿಸಿ ತಂದವನ ಹೋಗಿ
ಅಂದು ನಂಬೆಣ್ಣಗೆ ಹಡಪ ಹೊತ್ತವನ
ತಂದೆಯ ಕೊಂದು ಬಂದವನ ತನ್ನೊ
ಳಿಂಬಿಟ್ಟುಕೊಂಡಾನಂದದೊಳಿಹನ ೮

ಅಗ್ನಿನೇತ್ರವನುಳಿವನ..............
ದಕ್ಷಯಜ್ಞವ ಕೆಡಿಸಿ ಅಗ್ನಿ ತಾರಕನ
ವಿಘ್ನೇಶ್ವರನ ಪೆತ್ತವನ ಕಾಮ
ಸುಜ್ಞಾನಮೂರ್ತಿಯೆಂದೆನಿಸಿಕೊಂಬುವನ ೯

## ೩೦. ಸಂಗಮೇಶ್ವರನೊಲಿದ

ಎಂತು ಮರೆಯಲಿ ರಮಣಿ ಮಾಡಿದುಪಕಾರವನು
ಕಂತುರಿಪು ಸಂಗಮೇಶ್ವರನೊಲಿದನೆನಗೆ ॥ ಪಲ್ಲ ॥

ಚಂಡಕರ ಶಶಿಶಿಖಿಯ ಮಂಡಲಂಗಳ ಪೊರಗೆ
ಮಂಡನದ ವೇದಶಿರದಳದ ಸ್ಥಾನದಲ್ಲಿ
ತಂಡತಂಡದ ವಸ್ತುದೇವತೆಗಳಿಹ ಹರಿಯ
ಕಂಡೆನದನೇನಂಬೆ ಕಮಲದಳನೇತ್ರೆ ೧

ಎಂಟು ಹದಿನಾರು ಮೂವತ್ತೆರಡು ದಳದಲ್ಲಿ
ಎಂಟು ಶಕ್ತಿಯರು ಹದಿನಾರು ಗಣವರರು
ಎಂಟು ವಿದ್ಯೇಶ್ವರರು ಎಂಟು ದಿಕ್ಪಾಲಕರು
ಎಂಟು ವಸುಗಳು ಹರಿವ ಪರಿಗಂಡೆ ಕಾಂತೆ ೨

ಬಿಂದು ನಾದಾತ್ಮ ವಿದ್ಯ ವರ್ಣದಳದಲ್ಲಿ
ಸಂದಂಬಿಕೇಶ್ವರಿ ಗಣಾನಿ ಮನೋನ್ಮನಿಯ
ಮುಂದೆ ಹ್ರೀಂಕಾರವೆಂಬುಮೆಯೊಡನ ಸಹವಾಗಿ
ನಿಂದ ಶಾಂಭವದಿರವ ತೋರಿದನು ಸಖಿಯೆ ೩

## ೩೧. ಖುಲ್ಲ ಮನವೆ

ದೃಢವಾಗದವಿರಳ ನಡೆ ನುಡಿ
ತಡಬಡಗೊಂಬಲೆ ಬಡಮನವೆ ॥ ಪಲ್ಲ ॥

ಸತ್ಯಸದ್ಗುರುವಿನ
ತೊತ್ತು ಸೇವೆಗೆ ತನು
ವಿತ್ತು ತಾ ನಿಜಭಕ್ತನಾದೆನೆಂಬೆ
ಕರ್ತೃ ಶ್ರೀ ಗುರು ಕರೆದು ಕಿಂ
ಚಿತ್ಸವನು ಪೇಳೆ
ಹೊತ್ತು ಹೋಯಿತ್ತೆಂಬೊ ಕತ್ತೆ ಮನವೆ ೧

ಅನುಪಮಲಿಂಗದ
ನೆನಹ ನೆಲಸಿಯೆನ್ನ
ಬಿನುಗು ತ್ರಿಗುಣಬುದ್ಧಿಗಳೆಲ್ಲ ಒಳ್ಳಿತೆಂಬೆ
ನಿನಗನ್ಯವಾಗಿಹ
ಧನ ಕಾಮಿನಿಯರೊಳ
ಗಿನಿತು ಮೋಹವ ಬಿಡೇಳು ಶುನಕ ಮನವೆ ೨

ಅಂದಿನಿಂದ ಗಳಿಸಿದ
ಕುಂದದರ್ಥವನೆನ್ನ
ತಂದೆ ಜಂಗಮಲಿಂಗಕೀವೆನೆಂಬೆ
ಬಂದು ಜಂಗಮದೇವ
ರೆಂದು ಕಾಣಿಕೆ ಬೇಡ
ಹಿಂದೆ ಮರೆಯಾಗುವೇ ಹಂದೆ ಮನವೆ ೩

ಮಡದಿ ಮಕ್ಕಳು ತಾನು
ಒಡೆಯರ ದಾಸೋಹ
ಹಿಡಿವರಲ್ಲದೆ ಬಿಡಲಿಲ್ಲವೆಂಬೆ
ಒಡೆಯ ಲಿಂಗಾರ್ಪಿತ
ದೆಡೆಯೊಳು ಭಿಕ್ಷವನೆ
ನಡೆಯಯ್ಯ ಮುಂದೆಂಬ ಹಡಿಕಿ ಮನವೆ ೪

ಎನ್ನ ಮನೆಯು ಸುಪ್ರ
ಸನ್ನ ಸದ್ಗುರುಚರ

ದುನ್ನತವಾದ ಬೀಡಾರವೆಂಬೆ
ಮೊನ್ನೆ ಬಂದಯ್ಯ ತಾ
ಚೆನ್ನಾಗಿ ಕುಳಿತಿರೆ
ಇನ್ನು ಸಾಕೇಳೆಂಬೆ ಕುನ್ನಿ ಮನವೆ ೫

ಹೊರಗೆ ಕಂಡಲ್ಲಿಯೆನ್ನ
ಹರಣದೊಡೆಯ ಶಿವ
ಶರಣು ನಿಮಗೆ ಸ್ವಾಮಿ ಬನ್ನಿರೆಂಬೆ
ಕರೆದ ಸದ್ಭಕ್ತನೆಂದು
ಮರುದಿನ ಮನೆಗೆ ಬರೆ
ಗರಹೊಡೆದಂತೆ ಸುಮ್ಮನಿಹ ಮನವೆ ೬

ಬಲ್ಲವರಿಗೆ ಪರ
ವಲ್ಲಭೆಯರ ಸಂಗ
ಸಲ್ಲದ ನಡತೆಗಳೆಂದು ಪೇಳ್ವೆ
ಪುಲ್ಲೆಗಂಗಳೆಯರ
ಚೆಲ್ವಿಕೆಯನು ಕಂಡು
ಸಲ್ಲಾಪ ಮಾಡುವೆ ಖುಲ್ಲ ಮನವೆ ೭

ರೊಕ್ಕದಿಂದಲಿ ಸೊಕ್ಕು
ಸೊಕ್ಕಿನಿಂದಲಿ ದುಃಖ
ದುಖ್ಖದಿಂದಲಿ ಯಮಲೋಕವೆಂಬೆ
ರೊಕ್ಕದೊಳಾ ಘನ
ಮುಕ್ಕಣ್ಣ ಸವಿಯಲು
ಕಕ್ಕುಲತೆಯ ಪಡುವೊ ಚಿಕ್ಕಮನವೆ ೮

ನಡೆಯಂತೆ ನುಡಿ ನಿಜ
ನುಡಿಯಂತೆ ನಡೆ ತ
ಕ್ಕಡಿ ತ್ರಾಸಿನಂತೆ ಹೆಚ್ಚುಕಡಮಿಲ್ಲ
ನಡೆನುಡಿಯೊಂದಾದ
ರೊಡೆಯ ಶ್ರೀಗುರುವೀರ
ನಡಿಯ ಸೇವೆಯ ಮಾಡಿ ಪಡೆ ನಿಜವನು ೯

## ೩೨. ವ್ಯರ್ಥವಾಗಿ ಹೋಗುತಿದೆ

ವ್ಯರ್ಥವಾಗಿ ಹೋಗುತದಲ್ಲ ಮಾನವ ಜನ್ಮ ॥ ಪಲ್ಲ॥

ವ್ಯರ್ಥವಾಗಿ ಹೋಗುತಿದ
ಸುತ್ತಿ ನಾನಾ ಜನ್ಮದಲ್ಲಿ
ಮೃತ್ಯುವಿನ ಬಾಯಿಗೊಂದು
ತುತ್ತು ತಾನಾಗುತ್ತಲಯ್ಯ ೧

ಮುತ್ತಿನಂಥ ದಿನವು ಕಾಣಣ್ಣ ಮರೆತರೆಯಿನ್ನ
ಮೃತ್ತ ಬಂಧಕೆ ಹೋಗಬೇಕಣ್ಣ
ಹೆತ್ತ ತಾಯಿ ತಂದೆ ಬಂಧು
ಅತ್ತ ಮಾವ ಮಗಳಿಗಿನ್ನು
ಕತ್ತಯಂತೆ ದುಡಿದು ಹಾಕಿ
ಮತ್ತ ನಾನಾ ಜನ್ಮವಾನುವೆ ೨

ನೀತಿಶಾಸ್ತ್ರವ ತಿಳಿಯಲಿಲ್ಲವೊ ಈ ದೇಹದಲ್ಲಿ
ಕೋತಿಗುಣಗಳು ಹೋಗಲಿಲ್ಲವೊ
ಧೂರ್ತ ಪ್ರಯಾತರ ಜನ್ಮವು
ಭೂತನಾಥನ ಮರೆದ ಮೇಲೆ
ಹೋತ ಸೋಗೆಯ ತಿಂದು ಹರಕೆಗೆ
ಆತುರದಿ ಸಾಯುವಂತೆ ೩

ವೀರತನಗಳ ಮಾಡಲಿಲ್ಲಣ್ಣ ನೀನೀ ಭವದ
ಬೇರ ಬೇಗದಿ ಕಡಿಯಲಿಲ್ಲಣ್ಣ
ನಾರಿಯರನೆ ನೆಚ್ಚಿಕೊಂಡಡೆ
ಯಾರೂ ಕಾಯ್ವೊರಿಲ್ಲ ನಿನ್ನ
ಸೇರಿ ಗಂಗಾಧರನ ಪದವ ಮುಕ್ತಿಯನ್ನೆ ಪಡೆಯಲಿಲ್ಲ ೪

## ೩೩. ಎಂಥ ಕಲೆಗಾರ

ಎಂಥ ಕಲೆಗಾರಪುರುಷನಮ್ಮಿ
ಅಮ್ಮಿ ನಿನ ಗಂಡ ॥ ಪಲ್ಲ॥

ಅತ್ತಿತ್ತಲಾಟ ಬಿಡುಹೇಳುತಾನೆ
ಚಿತ್ತಶುದ್ಧವಾಗಿರು ಹೇಳುತಾನೆ
ಚಿತ್ತಲೆಯೆನ್ನನು ಬರುಹೇಳುತಾನೆ
ಸತ್ತು ಚಿತ್ತುಗಳ ತೋರಿಸುತಾನೆ ೧

ಮನೆಯ ಕೆಲಸವ ಬಿಡುಹೇಳುತಾನೆ
ಮನಸಿಗೆ ಸರಿಯಾಗಿರುಹೇಳುತಾನೆ
ಮುನಿಸು ಬೇಡ ಮುತ್ತ ಕೊಡುಯೆನ್ನುತಾನೆ
ಮನಿಗುವ ಮಂಚಕೆ ಬಾರೆನ್ನುತಾನೆ ೨

ಪರಿಮಳ ಪೂಗಳ ಮುಡಿಹೇಳುತಾನೆ
ಪರಿಪರಿ ವಿಧದೊಳಗಿರುಹೇಳುತಾನೆ
ತರತರದಾ ಮುತ್ತ ತಾರೆನ್ನುತಾನೆ
ಸರಸದ ಮಾತುಗಳಾಡೆನ್ನುತಾನೆ ೩

ಬಣ್ಣ ಬಂಗಾರವ ತೊಡುಹೇಳುತಾನೆ
ಹಣ್ಣು ಹಾಲು ತುಪ್ಪನ ಉಣ್ಣೇಳುತಾನೆ
ಅಣ್ಣ ತಮ್ಮಂದಿರ ತೂರ ಹೇಳುತಾನೆ
ತಣ್ಣಗೆ ತೆಪ್ಪಗೆ ಬಾಳೆನುತಾನೆ ೪

ಬಾಲಪ್ರಾಯದ್ಹಣ್ಣ ಬಾರೆನುತಾನೆ
ಲೀಲೆಯಾಗಿಯೆನ್ನಿರುಹೇಳುತಾನೆ
ಬಾಲೆ ರವಿಕೆಗಳ ಕಳೆಯೆಂಬುತಾನೆ
ಚೀಲಾಳೇಶನ ಪಡೆಯೆಂಬುತಾನೆ ೫

## ೩೪. ಬುದ್ಧಿಮಾತ ಕೇಳಬೇಕಮ್ಮಿ

ಬುದ್ಧಿಮಾತ ಹೇಳಿದರೆ ಕೇಳಬೇಕಮ್ಮಿ ಮನ
ಶುದ್ಧವಾಗಿ ಮನೆಯ ಗಂಡಗೆ ಬಾಳಬೇಕಮ್ಮಿ ॥ಪಲ್ಲ

ತಲೆಯ ತುಂಬ ಹೊದ್ದಿಕೊಳ್ಳ ತನುವ ಮುಚ್ಚಮ್ಮಿ ಮುಂದೆ
ತಲೆಯ ಚಿಗತಿ ಹೈಕಳ ಕಡೆ ಆಡಬೇಡಮ್ಮಿ ೧
ಎದೆಯ ಮೇಲೆ ಸರಗ ಹಾಕಿ ಸೀರ ಬಿಗಿದುಡಮ್ಮಿ ಮತ್ತೆ
ಹರೆಯದ್ಹುಡುಗರ ಕಂಡು ಹಲ್ಲ ಕಿರಿಯದಿರಮ್ಮಿ ೨

ಹಟ್ಟಿ ಹಟ್ಟಿ ತಿರುಗಬೇಡ ತಿಳಿಯಿತೇನಮ್ಮಿ ಮತ್ತೆ ದುರುಳ
ಬಿಟ್ಟು ಗುರುಹಿರಿಯರ ಮಾತ ಕೇಳಮ್ಮಿ ೩

ಬಾಗಿ ಬಗ್ಗಿ ನಡೆದರೆ ಮುಂದೆ ಬಾಳ ಲೇಸಮ್ಮಿ ಮಂಕೆ
ಕೂಗಿ ಮಾರಿಯ ಕರೆದರೆ ಮುಂದೆ ಬಾಳುಂಟೇನಮ್ಮಿ ೪

ನಾಗಲೀಕ ನಿನ್ನ ಗಂಡ ನಾಳೆ ಬರುತಾನೆ ಮಂಕೆ
ಪರಮಗುರು ಚೀಲಾಳೇಶನ ಧ್ಯಾನ ಮಾಡಮ್ಮಿ ೫

## ೩೫. ಅಚ್ಚರಿಯ ಕಂಡಾಯಿತು

ಆಲಲಲಲಲ ಅಚ್ಚರಿ ಕಂಡಾಯಿತು ಎನಗೆ ಗಾಬರಿ ॥ ಪಲ್ಲ ॥

ಅರಿಯದ ಮೂರ್ಖರಿಗೀ ಪರಿ
ಗುರುಭಕ್ತರಿಗಟ್ಟಂಗ ಮುರಿ ॥ ಅನುಪಲ್ಲ ॥

ಮೋರಿಲ್ಲದಕೇ ಮೈಯಾದ
ಮೈಯಿಗೆ ಸಾವಿರ ಕಾಲಾದೆ
ಕಾಲಿನ ತುದಿಯೊಳು ಕಣ್ಣಾದ
ಕಣ್ಣಿನೊಳಗೆ ಒಂದು ಹೆಣ್ಣಾದ ೧

ಹೆಣ್ಣಿನ ನೆಲೆ ಬಲು ದೂರಾದೆ ಮೂರು
ಕಣ್ಣುಳ್ಳವಗೆ ಭ್ರಮೆಗೊಳಗಾದೆ
ಬಣ್ಣಿಸಿ ಬಾಯಿ ತೆರದಾದೆ ನಾನು
ಪುಣ್ಯ ಪುರುಷರ ವಶವಾದೆ ೨

ಶಾಸ್ತ್ರೀಕರಲ್ಲಿ ಮುರಿಸಾದೆ ಅದು
ಕವಿಗಳ ಕಣ್ಣ ಕೀಳಿಸದೆ
ಕಿವಿಯೊಳು ನಾಲಿಗೆ ಚಾಚದೆ
ಗುರುಭಾದುರ ಮಡಿವಳ ನಾನಾದೆ ೩

## ೩೬. ಭಕ್ತಿಯ ಮಾಡಣ್ಣ

ಎಲ್ಲಿ ನೋಡಿದಡಿಲ್ಲ ಶಿವನು ನಿ
ನ್ನಲ್ಲಿಹನೆ ನೀ ನೋಡಣ್ಣ

ಬಲ್ಲ ಜಾಣರು ತಿಳಿದು ನಿನ್ನೊ
ಳುಲ್ಲಾಸದ ಭಕ್ತಿಯ ಮಾಡಣ್ಣ ॥ ಪಲ್ಲ ॥

ಕಾಶಿ ರಾಮೇಶ್ವರ ವಾಸ ಅಂಗ್ಯೆಯೊಳು
ದೇಶ ತಿರುಗಿದರಿಲ್ಲಣ್ಣ
ಮಾಸ ಶ್ರಾವಣ ಶಂಕರಾತ್ರ ಉಪ
ವಾಸ ಮಾಡಿದರಿಲ್ಲಣ್ಣ
ಸಾಸಿರನಾಮವು ಶಾಸ್ತ್ರ ಪುರಾಣವು
ಸಾಧಿಸಿ ಕಲಿತರಿಲ್ಲಣ್ಣ
ಏಸು ಕಾಲದಲಿ ಬೇಸರವಿಲ್ಲದೆ ತ
ಪಸ್ಸು ಮಾಡಿದರಿಲ್ಲಣ್ಣ ೧

ಪರುವತಕ್ಹೋಗಿ ಪಾತಾಳಗಂಗೆಯೊಳು
ತಲೆಯ ಬೋಳಿಸಿದರಿಲ್ಲಣ್ಣ
ಹರಿವ ನೀರಿನೊಳು ಮುಳುಮುಳುಗಿ ತಾ
ಬೆರಳನೆಣಿಸಿದರಿಲ್ಲಣ್ಣ
ಅರುಹುಗೆ ಅಹಂಕಾರದಿ ಬೇಗದಿ
ಪುರಾಣ ಕೇಳಿದಡಿಲ್ಲಣ್ಣ
ಪರಿಪರಿ ನಾಮವು ಪರಿಪರಿ ವ್ರತ
ಸರಿ ಶೀಲ ಮಾಡಿದರಿಲ್ಲಣ್ಣ ೨

ಹಸ್ತವರಿಗೆ ತುತ್ತನ್ನವ ನೀಡಲು
ಮತ್ತೆ ಮಾಡುವದು ದಾನಣ್ಣ
ಚಿತ್ತದಲ್ಲಿ ಶಿವ ಗೊತ್ತನರಿಯದೆ
ಉತ್ತರಿಸಿದಡೇನಿಲ್ಲಣ್ಣ
ಚಿತ್ತ ಸೋಮನ ಕರ್ತ ಶಿವನ
ಶಕ್ತಿಯಲ್ಲಿ ಶಿವನಿಹನಣ್ಣ ೩

## ೩೭. ಹಕ್ಕಿ ಹೊಡೆಯಣ್ಣ

ಕಾಕುಗುಣಗಳಿಂದ ಕಾಗೆ ಹಿಂಡು ಬರುತಾವಣ್ಣ
ಜೋಕೇಲಿ ಹಕ್ಕಿ ಹೊಡೆಯಣ್ಣ
ಒಕ್ಕಲ ಮುದ್ದಣ್ಣ ಜೋಕೇಲಿ ಹಕ್ಕಿ ಹೊಡೆಯಣ್ಣ ॥ ಪಲ್ಲ ॥

ಆರು ಕಾಲಿನ ಕವಣೆ ಆರೆಂಟು ತಟ್ಟಿಯ ಕವಣೆ
ಮನವೆಂಬೊ ಗುಂಡನಿಕ್ಕಣ್ಣ

ಸುಮಸುಮನೆ ಬರುವೊ ಸೂತ್ರದ ಕೊನೆಯ ಪಿಡಿಯಣ್ಣ
ಚಂದ್ರಮಂಡಲದಿಂದ ಸೂರ್ಯಮಂಡಲಕೆ ನೋಡಿ
ತ್ರಿಪುರಮಂಡಲಕೆ ಎಸೆಯಣ್ಣ ೧

ಎಂಟು ಕಾಲಿನ ಕವಣೆ ಎಂಟೊಂದು ತಟ್ಟಿಯ ಕವಣೆ
ಗಂಟುಗಂಟಿಗೆ ನಿಲ್ಲಣ್ಣ
ಸುಮ ಸುಮನೆ ಇರುವೊ ಸೂತ್ರದ ಕೊನೆಯ ಪಿಡಿಯಣ್ಣ
ಸೂರ್ಯಮಂಡಲದಿಂದ ಚಂದ್ರಮಂಡಲಕೆ ನೋಡಿ
ತ್ರಿಪುರ ಮಂಡಲಕೆ ಎಸೆಯಣ್ಣ ೨

ಸಪ್ತ ಸಾಗರದ ಹಕ್ಕಿ ಹತ್ತು ದಿಕ್ಕಿಲಿ ಬಂದೊ
ಹತ್ತು ದಿಕ್ಕನೆ ತಟ್ಟಣ್ಣ
ಹತ್ತು ಮೂರುವೀ ಮೂರುತಲೆಗಳ ಹರಿಯಣ್ಣ
ಚಿತ್ತಾಭಿದಾನಂದ ನಿತ್ಯ ಪರಿಪೂರ್ಣವಾದ
ಅಖಂಡದಾ ಕವಣೆ ಪಿಡಿಯಣ್ಣ ೩

## ೩೮. ಮದವೇರಿತಲೆಯೆಲೆ

ಮುಕ್ಕಣ್ಣ ಮಹದೇವನ ನೆನೆಯಲು
ಮುಕ್ಕುಳಿ ತುಂಬಿತೇನಲೆಯೆಲ
ಅಕ್ಕರದಿಂದಲಿ ಚಿಕ್ಕಬುದ್ಧಿಯ ಕಲ್ತು
ಸೊಕ್ಕಿನ ಮದವೇರಿತಲಯೆಲ ॥ ಪಲ್ಲ ॥

ಅನ್ನ ವಸ್ತ್ರ ಶಿವ ಆನಂದ ಕೊಟ್ಟರೆ
ಕೋಣನ ಮದವೇರಿತಲಯೆಲ
ಮಾನವಜನ್ಮಕೆ ಬಂದು ದಾನಧರ್ಮವ ಬಿಟ್ಟು
ಮೌನದಿ ಕುಳಿತಿರ್ದಲಯೆಲ ೧

ವೇದ ಶಾಸ್ತ್ರ ಪೌರಾಣವನೋದಿ
ಭೇದವು ತಿಳಿಲಿಲ್ಲಲಯೆಲ
ಪಾದತೀರ್ಥ ಬಿಟ್ಟು ಅನ್ಯತೀರ್ಥಕ್ಹೋಗಿ
ಪಾದಲೀನ ಪಡೆಯಲಿಲ್ಲಲೆಯೆಲ ೨

ಮುದನೂರುಸ್ಥಳದಲ್ಲಿ ಮುತ್ತಿನ ಪೆಂಡ್ಯ
ಪ್ರಹುಢ ಹೇಳಿದ ಪದವಲ್ಲಯೆಲ
ಗುರುಲಿಂಗಪ್ಪನ ಚರಣಕಮಲವನು
ಸ್ಥಿರವಾಗಿ ಪಡಕೊಳ್ಳಲೆಯೆಲ ೩

## ೩೯. ಒಗತನ ಮಾಡಿದೆನೆ

ಸುವ್ವಿ ಸುವ್ವಿ ಕಾಣೆರಿ ಸುವ್ವೀ ಸುಜ್ಞಾನದ
ಪೂರದಾರೆತ್ತಲೈತೆ ಹರಿದಾರಿ ಸುವ್ವಯನಾರಿ ॥ ಪಲ್ಲ ॥

ಒಂಬತ್ತು ಬಾಗಿಲೊಳು ಒಂದೆ ಜೋಡಿಯ ತುಂಬಿ
ನಂಬಿಗಿಲ್ಲದ ಒಗತನ ಮಾಡಿದನೆ ೧

ತನುವೆಂಬೊ ಕಲ್ಲಿನೊಳು ಮನವೆಂಬೊ ಮುಕ್ಕು ಹಾಕಿ
ವನವನದು ಒಬ್ಬಳೆ ಬೀಸಿದನೆ ೨

ಅರವತ್ತುಆರುಕೋಟಿ ಕರುಣದ್ನುರುಳಿಯನೆ ತಂದು
ಉರು ಉರುಹಿ ರೊಟ್ಟಿಯ ಸುಟ್ಟೆನೆ ೩

ಅಷ್ಟಪಾಶಗಳೆಂಬೊ ನಷ್ಟಧಾನ್ಯವನೆ ತಂದು
ಕುಟ್ಟಿ ಕುಟ್ಟಿ ತಟ್ಟಾಗೆಳದೆನೆ ೪

ಕಾಮಕ್ರೋಧಗಳೆಂಬೊ ತಾಪನಲ್ಲವನು ಕಳೆದು
ಪ್ರೇಮದಿಂದಲಿ ಅನ್ನಕಿಟ್ಟೆನೆ ೫

ಉಟ್ಟುಟ್ಟುರುಹುತ್ತ ದೃಷ್ಟಿಸಿ ನೋಡುತ್ತ
ದಿಟ್ಟವೆಂಬೊ ಅನ್ನಬೋನವನೆ ೬

ಅಷ್ಟರೊಳಗೆ ಗಂಡ ಬಂದು ಅಡುವೂ ಮಡಕೆ ಒಡದು
ಮುಟ್ಟಿ ಮುರಿದು ಮೇಲಕೆ ಹತ್ತಿದನೆ ೭

ಮರವಿಟ್ಟು ಸೆಳಕೊಂಡು ಅರವಿಟ್ಟು ವರ ಕೊಟ್ಟು
ತಿರಿಗಿ ಬಾರದಂತೆ ಮಾಡಿದನೆ ೮

ಸ್ಥಿರವಲ್ಲ ಈ ಸಂಸಾರ ನೆರನಂಬಿ ಬರದಂತೆ
ಗುರು ಗುಹೇಶ್ವರನ ಕೂಡಿದೆನೆ ೯

## ೪೦. ಕಂಡೆನೊಂದ ಕನಸ

ಕಂಡೆ ಕಂಡೆನೊಂದ ಕನಸನಿರುಳು ಜಾವದಿ ॥ ಪಲ್ಲ ॥
ಕಂಡ ಒಬ್ಬನೊಡನೆ ಕೂಡಿ ಹೆಂಡತಿಯಾದುದ

ಹಾಳೂರಗೌಡನೇ ನವಯೇಳು ಮಂದಿಯಿನ್ನೆಂತು
ತೋಳನೊಂದು ಮರಿಯ ತಿಂದು ಏಳಿಗಾಯಿತು

ಕಾಡಬೇಡನೊಂದು ಕಪಿಯ ಕಾಯಿದು ಕಾಯಿದು
ಕಣ್ಣುಗೆಂಟ.........ಯೆದ್ದ್ವಳವನ ತಂಗಿ ಶೂನ್ಯಗಾ ೧

.............ಮೂಗನೊಂದು ಕಾಗೆಯನು ತಿನ್ನ
ಲಾಗು ಜಾಗರಂಗಳುದಯವಖಿಳ ಜಗದ...
ಜಾಗರಂಗಳೊಳಗೆ ಚಿ......ಜಗ ಕಂಗಳೊಳುದಿಸೆ ಮೊರೆವ
ಕೋಗಿಲೆಯೊಂದು ಕೊನೆಯನೇರಿ ಕರೆಯೆ ಕಂಡೆನು ೨

ಹೆತ್ತತಾಯಿ ಮಗನ ಮೆಚ್ಚಿ ಅತ್ತೆ ಅಳಿಯನಾಗಿ ನಡೆದು
ಹೊತ್ತುಗಳವ ವೇಳ್ಯದಲ್ಲಿ ಸತ್ತನೊಬ್ಬನು
ಹೊತ್ತು ಹೊಂದಿ ಹೊಳೆಯ ದಾಂಟಿ ಅತ್ತಲಿತ್ತ ನೋಡಿ ತನ್ನ
ಮತ್ತೆ ಕದ್ದುಕೊಂಡನೊಬ್ಬ ಕಳ್ಳಭಂಟನೊ ೩

ಅಕ್ಕ ತಮ್ಮನೊಡನೆ ಕೂಡಿ ಮಕ್ಕಳ್ಳದ ಹೆತ್ತುಕೊಂಡು
ದಿಕ್ಕುಗೆಟ್ಟು ದೇಶದೊಳು ತಿರಿದುಂಬುತ
ಹೊಕ್ಕು ಸೋಮಸೂರ್ಯವೀಧಿ ಇಕ್ಕೆಲದ ನಡುವೆ ನಿಂದು
ನಕ್ಕರವಳು ತನ್ನ ತೋರಿ ನನ್ನ ಕೂಡ್ವಳೊ ೪

ಏಡಿ ಒಂದು ಅಜನ ತಲೆಯ ಆಡಿಸಿ ಆಡಿಸಿ......: ನಿಂದು
ಓಡಿನಲ್ಲಿ ನೀರಕುಡಿದು ಒಲೆಯ ಕೂಡಲು
ಹಾಡಿ ಹೊಗಳಿ ಹಳಸಿಕೊಂಡ....ಡಿದ ಬ(ವ)ಕೆಗಳನು
ನೋಡ ನೋಡಲೊಡದನೊಬ್ಬ ಗಾಡಿಕಾರನು ೫

ಕಾಡು ಒಂದು ಮೇಡು ಐದು ಓಡು ಒಂದು ಒಲೆಯು ಮೂರು
ನಾಡ ನಾಯ್ಗಳ್ಹೊಡಿಕೊಂಡ ಬೇಡನೊಬ್ಬನು
ನೋಡಿ ಹಿಳುಕ ಹೂಡಿ ಒಂದು ಜೋಡುಮುಖದ ಕಪಿಯನೆಸದು
ಓಡಿನಲ್ಲಿ ತಿಂದು...... ನರಿಗಲಾಡಿದ ೬

ಎತ್ತು ಒಂದು ಏರಿಯಲ್ಲಿ ಸತ್ತು ಹುಲ್ಲುನೀರನುಂಡು
ಮತ್ತೆ ಹೊಲಬುದಪ್ಪಿ ಕಾಡ ಸೇರಲು
ಎತ್ತನರಸ ಹೋಗಿ ಒಬ್ಬ ಸತ್ತವಣಿನ ಕೈಯಲೊಂದು
ಮುತ್ತ ಕಂಡು ಹೆತ್ತತಾಯ ಕೂಡಿಕೊಂಡನು ೭

ನೀರುಯೇರಿಯನ್ನು(ಉ)ಂಡು ವಾರಿಧಿಯ ಸೇರಲಾಗ
ಆರುಮೂರು ಒಂಬತ್ತು ತೋಟ ಕೆಟ್ಟವು

ನಾರಿವಾಣದ ಸಸಿಯ ಬೇರಿನಲ್ಲಿ ಮೊನೆಯು ಮೂಡಿ
ಮೂರುಕಣ್ಣನೊಳು ರಸ ತೊಟ್ಟಿಡುತ್ತಿದೆ ನೋಡ ೮

ನಂಚಾಸಿಯಾದ ಕಾಲ ಬಂಜೆ ಮಗುವ ಹೆತ್ತ ಕಾಲ
ರಂಜನೆಗಳೆಲ್ಲ ಉಡುಗಿಹೋದ ಕಾಲ
ಮುಜೂರ ಹಿರಿದುಕೊಂಡು ಮನೆಯನ್ನು ಸುಟ್ಟುಕೊಂಡು ನಿ
ರಂಜನನಾದ ಸಿದ್ಧ ಪರಮ ಗೊಹೇಶ್ವರಯ್ಯನು ೯

## ೪೧. ಕಾಣಲರಿಯದೆ

ಮುಂಡಯರಾದರೆಲ್ಲ ಪಿಂಡಾಂಡದೊಳಗಣ
ಗಂಡನ ಕಾಣದೆ ॥ ಪಲ್ಲ ॥

ಆಧಾರ ಮೊದಲಾದ ಆರುಚಕ್ರವ ಮೀರಿ
ನಾದ ಮೊದಲಾದ ಕಳೆಯಾಡಬೇಕು
ವೇದಕ್ಕೆ ದೂರಾದ ಚಿದ್ರೂಪದ ಲಿಖಿತವ
ಓದಿ ಹೃದಯದೊಳೊಂದನ ಕಾಣದೆ ೧

ನಾದದೊಳಡಗಿದ ಸುನಾದದೋಂಕಾರದಿ
ಪಾದತೀರ್ಥದಿ ಪರಿಣಾಮಿಯಾಗದೆ ೨

ನವನಾಳಮಧ್ಯದಿ ಪವನಸೂತ್ರವ ಬಲಿದು
ಶಿವನ ತ್ರಿಪುರವನು ಸೆರೆಗೊಳದೆ
ಭವರೋಗವೈದ್ಯನ ಆವಗ ನೆನೆಯದೆ
ತವಕಿಸದಿರು ಗುಹೇಶ್ವರಯ್ಯನ ಕಾಣಲರಿಯದೆ ೩

## ೪೨. ಇನ್ನೇನಿನ್ನೇನು

ಚಿಂತೆಯಳಿದು ಮನ ಚಿತ್ಕಳೆ ತೋರಿತು ಇನ್ನೇನಿನ್ನೇನು
ಭ್ರಾಂತಿಗಳೆಲ್ಲವು ಬಯಲಾಗಿ ಹೋದವು ಇನ್ನೇನಿನ್ನೇನು ॥ ಪಲ್ಲ ॥

ಮಾಯಪ್ರಪಂಚದ ಮರ್ಮವು ತೀರಿತು ಇನ್ನೇನಿನ್ನೇನು
ಕಾಯಸೂತ್ರಂಗಳ ಕಾಂಕ್ಷೆಯು ತಪ್ಪಿತು ಇನ್ನೇನಿನ್ನೇನು
ದೇಹಗುಣಂಗಳು ತೆರಳುತ್ತ ಪೋದವು ಇನ್ನೇನಿನ್ನೇನು
ಪ್ರಾಯದ ಉಪಟಳ ಸಹಸವು ಉಡುಗಿತು ಇನ್ನೇನಿನ್ನೇನು ೧

ದಾರಿದ್ರ್ಯ ದುರ್ಗುಣ ದೆಸೆಗೆಟ್ಟು ಪೋದವು ಇನ್ನೇನಿನ್ನೇನು
ದುರುಳ ಮನ್ಮಥಬಾಧೆ ತರಹರವಾಯಿತು ಇನ್ನೇನಿನ್ನೇನು
ಪರಮ ಸದ್ಗುರುಬೋಧೆ ಸ್ಥಿರವಾಗಿ ನಿಂತಿತು ಇನ್ನೇನಿನ್ನೇನು
ಶರಣಜನಂಗಳ ಸೇವೆಯು ದೊರಕಿತು ಇನ್ನೇನಿನ್ನೇನು ೨

ಪರಮತಾರಕಬ್ರಹ್ಮ ಸ್ಪೃಹಣೆಯು ದೊರಕಿತು ಇನ್ನೇನಿನ್ನೇನು
ನಿರುತ ಪರಮಾತ್ಮ ಪದದೊಳು ಭಾವ ಬಯಲಾಯಿತ್ತು ಇನ್ನೇನಿನ್ನೇನು
ತಾರಕಲಕ್ಷದ ನಿಜಸಿದ್ಧಿ ದೊರಕಿತು ಇನ್ನೇನಿನ್ನೇನು
ಗುರುಗುಂಡಬ್ರಹ್ಮವು ಗೋಚರವಾಯಿತ್ತು ಇನ್ನೇನಿನ್ನೇನು ೩

## ೪೩. ಮುಕ್ತಿಯಹುದೆ

ಮಾತುಮಾತ್ರದಿ ಮುಕ್ತಿಯಹುದ
ನಿತ್ಯ ಆತ್ಮಜೇನೋಡಿ ಜತೆಗೂಡೋದನಕ ॥ ಪಲ್ಲ ॥

ಪರಮದೂತರುಗಳ ಸೇರೋದನಕ ಅವರ
ಹರನೆಂದು ನಿರುತದಿ ನೆರೆ ನಂಬೋದನಕ
ಗುರುಸೇವೆ ಸ್ಥಿರವಾಗೋದನಕ ಅಲ್ಲಿ
ಪರಮಯೋಗವ ಬೆರೆದು ಗುರಿ ನೋಡೋದನಕ ೧

ಎಂಟುದಾಳವ ಮೆಕ್ಕೋದನಕ ಅಲ್ಲಿ
ಕಂಟಕವಿಲ್ಲದೆ ಕಳೆ ನೋಡೋದನಕ
ಗಂಟೆನಾದವ ಕೇಳೋದನಕ ಅಲ್ಲಿ
ಮಂಟಪಜ್ಯೋತಿಯೊಳ್ ಮೈ ಮರೆದನಕ ೨

ಕುಂಡಲಿ ಭೇದಿಸೋದನಕ ಅಲ್ಲಿ
ಮಂಡಲತ್ರಯಗಳ ಮನಗೂಡೋದನಕ
ಪುಂಡರೀಕವನೇರೋದನಕ ಅಲ್ಲಿ
ಗುಂಡಬ್ರಹ್ಮಾನಂದಗುರು ಕೂಡೋದನಕ ೩

## ೪೪. ನೋಡು ಮನವೆ

ಕರಣಸಂಗಗಳಿಂದ ಕಳವಳಗೊಳದಿರು ಮನವೆ ಕೇಳೆಚ್ಚರಿಕೆ ನಿತ್ಯ
ಪರಮ ತಾರಕ ಲಕ್ಷ ಭಾವಿಸಿ ಗುರಿ ನೋಡು ಮನವೆ ॥ ಪಲ್ಲ ॥

ಸ್ಥಿರವಲ್ಲ ನರದೇಹ ಚೆಲುವಿಕೆ ಧರೆಯೊಳು ಮನವೆ
ಪರಿಪರಿ ಸಂಸಾರಪಾಶಕೆ ಹೊರಗಾಗು ಮನವೆ
ಪರಮಗುರುಗಳ ಭಕ್ತಿ ಸ್ಥಿರವಾಗಿ ನೆರೆನಂಬು ಮನವೆ
ಹರಶರಣರ ಭಕ್ತಿ ಮರೆಯದೆ ನೀ ಮಾಡು ಮನವೆ ೧

ಪಂಚಭರಿತ ದೇಹ ಫಲವಿಲ್ಲಯಿದರಿದು ಘನವೆ
ಪಂಚವಿಂಶತಿತತ್ವ ಬಾಗಿಸಿ ನೀ ನೋಡು ಮನವೆ
ಅಂಚಿತ ಆತ್ಮನ ಆ ಮನಸ್ಕನೊಳು ಮನವೆ
ಪಂಚಾಕ್ಷರಿಮಂತ್ರ ಪಠಣೆಯ ನೀ ಮಾಡು ಮನವೆ ೨

ಅಂಡಾಂಡ ಪಿಂಡಾಂಡ ಐಕ್ಯಭಾವದಿ ನೋಡು ಮನವೆ
ಕುಂಡಲಿಯನು ಕೂಡಿ ಮಂಡಲಂಗಳ ದಾಂಟಿ ಮನವೆ
ತಂಡತಂಡದ ಬೆಳಕು ತಾರಕದೊಳು ನೋಡು ಮನವೆ
ಗುಂಡಬ್ರಹ್ಮಾನಂದಗುರುಮೂರ್ತಿಯನು ಕೂಡು ಮನವೆ ೩

## ೪೫. ಧ್ಯಾನವೆ ಚೆಂದ

ಭೋಗಾಮೃತಪೂಜೆ ಮಾಡುವ ಯೋಗವೆ ಚೆಂದ
ನಾಗಭೂಷಣ ವೇದಗೋಚರನಾಟವೆ ಚೆಂದ ॥ ಪಲ್ಲ ॥

ಅಂಗಲಿಂಗದೊಳಗೆ ಸಂಗಸುಖವನೆಲ್ಲವ ಸವಿದು ತಾ
ರಂಗಳನ್ನು ತೂರಿದ ಪ್ರತಾಪವೆ ಚೆಂದ
ಕಂಗಳೂರ ಮಧ್ಯದಲ್ಲಿ ಮಂಗಳರೂಪನ ಕಂಡು
ಗಂಗೆಯಮುನೆಯೆಂಬ ನದಿಯ ಸ್ನಾನವೆ ಚೆಂದ ೧

ಮಾನಾಭಿಮಾನಗಳ ಜ್ಞಾನದಿಂದುರುಹ ಬಿಟ್ಟು
ಏನುಯಿಲ್ಲದ ಮನದ ಸನ್ಮಾರ್ಗವೆ ಚೆಂದ
ನಾನು ನೀನು ಎಂಬುದಿಲ್ಲದೆ ತಾನೆಯಾಗಿಯಿರುವ ನಿತ್ಯ
ಭಾನುಕೋಟಿ ಪ್ರಭೆಯ ಲಿಂಗನ ಧ್ಯಾನವೆ ಚೆಂದ ೨

ಸತ್ತು ಚಿತ್ತಾನಂದವೆಂಬ ವಿತ್ತವ ಗಳಿಸಿ ತಾನು ಬೇಗ
ಉತ್ತರಕೆ ಕುಂಡಲಿಯನೊತ್ತಲು ಚೆಂದ

ಮೊತ್ತ ಮೊತ್ತವಾಗಿ ನಿಂದು ಕತ್ತಲೆಯ ನುಂಗಿಕೊಂಡು
ನಿತ್ಯವಾಗಿ ತೋರಿ ಮೀರಿದ ವಸ್ತುವೆ ಚೆಂದ ೩

ಆರು ಮೂರು ಬಾಗಿಲಲ್ಲಿರ್ಪವರು ಕಾದಿರುವರವರು
ನಾರಿ ಒಬ್ಬಳ ನೋಡುವ ವಿಚಾರವೆ ಚೆಂದ
ತೋರಿ ಹಾರಿ ಮಾರುತಿರ್ಪ ಮಾರಿಯನ್ನು ಕಾದು ಮೋಕ್ಷ
ದಾರಿಯನೇರುವದೊಂದು ಮೊಗವೆ ಚೆಂದ ೪

ಅಂದು ಇಂದು ನಾಳೆಯೆಂಬ ದಂದುಗಯೆಲ್ಲವನು
ಒಂದು ಗುರುಪಾದಸೇವೆ ಅಂದವೆ ಚೆಂದ
ವಂದನೆ ನಿಂದನೆಗಳಿಗೆಯೆಂದಿಗುಯಿಲ್ಲದ ಸಂಗ
ಸಂದನೆಗೂಡಿದ ಮಲ್ಹಾರೂಢನೆ ಚೆಂದ ೫

## ೪೬. ಸೂರೆಗೊಂಡ

ವೀರನಲ್ಲವೆ ಶರಣ ಧೀರನಲ್ಲವೆ
ಪಾರಮಾರ್ಥವೆನಿಪ ತತ್ವ ಸಾಂಬ
ಪುರವ ಸೂರೆಗೊಂಡ ॥ ಪಲ್ಲ ॥

ಮೌನವೆಂಬೊ ಬಿಲ್ಲು ಮಾಡಿ
ಸ್ನಾನವೆಂಬೊ ನಾದವಿಡಿದು
ಧ್ಯಾನವೆಂಬೊ ಅಂಬ ಹಚ್ಚಿ
ಶೂನ್ಯಪುರವ ಸೂರೆಗೊಂಡ ೧

ಪ್ರಣಮವೆಂಬೊ ಭೇರಿ ನುಡಿಸಿ
ಮೌನವೆಂಬೊ ಸಾಹಸದಿ
ವಿನಯವೆಂಬೊ ತುರುಗನೇರಿ
ತ್ರಿಣಯಪುರವ ಸೂರೆಗೊಂಡ ೨

ಶಕ್ತಿಯೆಂಬೊ ಗಿರಿಯನೇರಿ
ಭಕ್ತಿಯೆಂಬೊ ಯೋಗ ನಟಿಸಿ
ಮುಕ್ತಿಯೆಂಬೊ ಸಾಹಸದಿ
ಮುಕ್ತಿಪುರವ ಸೂರೆಗೊಂಡ ೩

ಪಂಚಾಕ್ಷರಿಯ ಶೀಲಮಾಡಿ
ಪಂಚಲಿಂಗ ಮುಂಚೆ ಹೂಡಿ
ಪಂಚಬ್ರಹ್ಮರ ಕೊಂದು
ಪರಮಪದವಿ ಸೂರೆಗೊಂಡ ೪

ಅಷ್ಟದಳದ ರಥವನೇರಿ
ದೃಷ್ಟಿಯೆಂಬೊ ಗುರಿಯನಿಟ್ಟು
ಇಷ್ಟಮುದ್ದುಸಂಗಮಾಬ್ಧಿ
ನಿಷ್ಠೆಯಿಂದ ಸೂರೆಗೊಂಡ ೫

## ೪೭. ಮಹಾಘನದೊಳು ಚರಿಸುವ

ಶರಣರ ಹೊಲಬ ಸತ್ಪುರುಷರಲ್ಲದೆ
ನರಗುರಿಗಳು ಬಲ್ಲರೆ
ಮರದ ಮಧ್ಯದೊಳು ಸ್ಥಿರಗೊಂಡ ಅಗ್ನಿಯ
ತೆರದಿ ಹುದುಗಿ ಮಹಾಘನದೊಳು ಚರಿಸುವ ॥ ಪಲ್ಲ ॥

ವಾದವ ಮಾಡರು ವೇದಕೆ ನಿಲುಕರು
ಗಾದೆವಾಕ್ಯಗಳೆಲ್ಲ ಗಹಿಮಾಡುವರು
ಶೋಧಿಸಿ ಸಕಲ ತತ್ವಂಗಳ ತಮ್ಮೊಳು
ಸಾಧಿಸಿ ಸದುಗುಣಂಗಳೆನಿಸಿ ಸಂಚಳಿಸುವೊ
ನಾದದಲಿ ತತ್ವವಿಚಾರದಲಿ
ಭೇದಮಾಡರು ಬಾಯಬ್ರಹ್ಮರು ವಿ
ನೋದದಿಂದಲಿ ಓಲಾಡಿ ಸಾಂಬನ
ಪಾದದಲಿ ಮನ ಘನಿಸಿಪ್ಪರು ೧

ಬಡಿವಾರ ಮಾಡರು ಬಡವರುದ್ಧರಿಪರು
ಕೆಡಲೆಂದು ಅನ್ಯರ ಶಾಪಿಸರು
ನುಡಿಗಳೊಳು ಸುಧೆ ಸುರಿವುತಿರ್ಪರು
ಎಡರು ಬಂದರೆ ಕಂದಿ ಕುಂದರು
ಕಡಲ ಕ್ಷಮೆ ದಮೆ ಶಾಂತಿಯುಳ್ಳರು
ಬಿಡದೆ ಬಂದುದ ಸ್ವೀಕರಿಸುವರು ೨

ಭೃತ್ಯಭಾವದಿ ವಂದಿಸುವರು ಶಾಂತರ ಕಂಡು
ಕರ್ತು ನೀನೆಂದು ಕೊಂಡಾಡುವರು
ಉತ್ತಮರು ವರವೀವರು ಒಂ
ಬತ್ತು ಚಕ್ರಕ್ಕೇರಿ ಮಧ್ಯದಿ
ಕರ್ತು ಶ್ರೀ ಗುರುಸಂಗಮೇಶನ
ಗೊತ್ತು ತಿಳಿದತಿ ಗೋಪ್ಯರೆನಿಸುವ ೩

## ೪೮. ಪದುಳವಲ್ಲವೆ

ಪದುಳವಲ್ಲವೆ ನೋಡ ಪದುಳವಲ್ಲವೆ
ಸದಮಲಾತ್ಮಕ ಲಿಂಗದಲ್ಲಿ
ಹುದುಗಿದಂಥ ಶರಣ ಜನಕೆ ॥ ಪಲ್ಲ

ಅಂಗ ಹಸ್ತ ಶಕ್ತಿ ಭಕ್ತಿ
ಲಿಂಗತೃಪ್ತಿ ವರ್ಣಮುಖವು
ಕಂಗಳಲ್ಲಿ ಕಂಡವಿಷ್ಟ
ಲಿಂಗದಲ್ಲಿ ಬೆರೆದವರ್ಗೆ ೧

ಆದಿ ಅಂತ್ಯಮಾಡಿಯಂತ್ಯ
ವಾದಿ ಮಾಡಿ ಸೋಹಮ್ಮೆಂದು
ವಾದವರ್ಣದೆರಡುವಳಿದು
ನಾದಬ್ರಹ್ಮವಾದಗೆ ೨

ಕಂಗಳರೆಯ ಮುಗಿದು ಯಮುನೆ
ಗಂಗೆಯಜನ ರಮಣಿ ರವಿಯೆ
ತಿಂಗಳಗ್ಗಿ ಕೂಡಿದಲ್ಲಿ
ಪೊಂಗೆ ವಾಯುಮ ನಿಲಿಸಿ ೩

ಚಕ್ರವಾರು ಚಕ್ರವೆರಡು
ಚಕ್ರವಂದೆಯಾದ ಬ್ರಹ್ಮ
ಚಕ್ರಜ್ಯೋತಿಯಲ್ಲಿ ಬೆರೆದು
ವಿಕ್ರಮಾಂಕರಾದವರ್ಗೆ ೪

ಆದಿ ಸಂಗಮೇಶನಿರವ
ವೇದಮಯದಿ ತಿಳಿದು ನಿಜದ
ಹಾದಿವಿಡಿದು ಪೋದವರ್ಗೆ ೫

## ೪೯. ಲಿಂಗಯ್ಯ ಮಾತಾಡೊ

ಬೇಡಿದುದೇನೊ ನಾ ನಿನ್ನ ಮಾತ
ನಾಡಬಾರದೆ ನೀಯೆನ್ನ
ಬೇಡಿದ ಭಿಕ್ಷವ ಓಡಿನೊಳ್ ತಿರಿದುಂಡ
ಗಾಡಿಕಾರ ಲಿಂಗಯ್ಯ ಮಾತಾಡೊ ॥ ಪಲ್ಲ

ಮುತ್ತುರತ್ನವನು ಬೇಡಿದೆನು ನಾನು
ಮುತ್ತೆಲ್ಲಿ ತರಲೆಂದು ಮುನಿದ
ಮುತ್ತು ನಂ ಶರಣರು ಮತ್ತೆ ಮಾಡ್ಯಾರು
ಇತ್ತೊಮ್ಮೆ ಮಾತಾಡೊ ಗುರುವ ಲಿಂಗಯ್ಯ ೧

ಹೊನ್ನು ಹಣವ ಬೇಡಿದೆನೆ ನಾನು
ಹೊನ್ನೆಲ್ಲಿ ತರಲೆಂದು ಮುನಿದೆ
ಹೊನ್ನು ನಂ ಶರಣರು ಮತ್ತೆ ಮಾಡ್ಯಾರು
ಇತ್ತೊಮ್ಮೆ ಮಾತಾಡೊ ಚಲುವ ಲಿಂಗಯ್ಯ ೨

ಅರುಹು ನಾ ಬೇಡಿದುದೇನೊ ನೀನು
ಕರೆದರೆ ಮಾತಾಡಲೊಲ್ಲೆ
ಅರುಹು ನಂ ಶರಣರು ಉರುಹಿಬಿಟ್ಟರುಯೆಂದು
ಇತ್ತೊಮ್ಮೆ ಮಾತಾಡೊ ಸಿದ್ಧಲಿಂಗಯ್ಯ ೩

ಆಸೆಪಾಸೆಯನ್ನು ಬೇಡಿದೆನೆ ನಾನು
ಆಸೆಲ್ಲಿ ತರಲೆಂದು ಮುನಿದೆ
ಆಸೆ ನಂ ಶರಣರು ರೋಸಿ ಬಿಟ್ಟರುಯೆಂದು
ಇತ್ತೊಮ್ಮೆ ಮಾತಾಡೊ ಮುದ್ದುಲಿಂಗಯ್ಯ ೪

ಬದ್ಧವಿದೇನಯ್ಯ ನಿಮಗೆ ನಾನು
ಎದ್ದುಬಂದವನೆಂದು ಮುನಿದೆ
ಎದ್ದೊಮ್ಮೆ ಮಾತಾಡು ಸಿದ್ಧವೃಷಭನ ಕೂಡೆ
ಮುದ್ದುಮುಖದ ಕರಸ್ಥಲದ ಲಿಂಗಯ್ಯ ೫

## ೫೦. ಬೆಳಕಿನ್ನೆಲ್ಲಿ

ಬೆಳಕಿನ್ನೆಲ್ಲಿಹುದಾ ಲಿಂಗದ ಕಳೆಯಹುದೆಲ್ಲಿಹುದು (ತ್ರಿಗು) ಣ
ಸುಳುಹುಗಳರಿಯದೆ ಬರಿದೆ ಕೂಗುವ ಕುಹುಕ ಮನುಜರಿಗೆ ॥ ಪಲ್ಲ

ಆರು ಓದಿದಡೇನು ಆರು....ವ....
(ಆರ)ನು ಸಾಧಿಸಿ ಕಿವಿಯಲಿ ಕೇಳಿದಡೇನು
ಕಾಮವ ಕಳೆಯದೆ ಕ್ರೋಧವ ಮರೆಯದೆ
ಹೋರಾಡಿ ಮುಳುಗುವ ಹೊಲಸಾತ್ಮಕರಿಗೆ ೧

ಮಾತಿನ ಬಣಬೆ ಮುಂದಿಟ್ಟುಕೊಂಡು
ನೀತಿಶಾಸ್ತ್ರಗಳ ಒಂದೊಂದ್ಹೇಳುತ
ಆತ್ಮದಲಿರುವ ಅರಿವ ತಾನರಿಯದ ಈ
ಮೂತ್ರದ ಕುಣಿಯಲಿ ಮುಳುಗಾಡುವರಿಗೆ ೨

ತನ್ನಲ್ಲಿ ಗುರು ಲಿಂಗ ಜಂಗಮವಿರಲಿಕೆ
ಅನ್ಯದೈವಕೆ ಅಡ್ಡಬೀಳುತಲಿ
ಹೆಣ್ಣು ಮಣ್ಣು ಹೊನ್ನು ಮೂರಕೆ
ಬಣ್ಣಿಸಿ ತಿರುಗು ಅಣ್ಣಂಗಳಿಗೆ ೩

ಕಾಯದಲಿರುವ ಮಾಯದಲಿಂಗ ಅದ
ರಾಯನವ ಮರೆತನು ಬರಿದೆ
ಬಾಯಿಮಾತಿನೊಳಗೆ ಒಂದೊಂದ್ಹೇಳುತ ಈ
ಮಾಯವಿಮೋಹದಿ ಮುಳುಗಾಡುವರಿಗೆ ೪

## ೫೧. ಪೂಜೆಮಾಡುವರ್‍ಯಾರು

ದುರ್ಮನವನು ಬಿಡರು ಶಿವಶಿವ ॥ ಪಲ್ಲ

ಇಂದುಧರನ ಚರಣದಲ್ಲಿ
ಒಂದಿ ಸುಖದಲಿರಲು ಮನವು
ಕುಂದದನ್ಯ ವಿಷಯದತ್ತ ಹರಿವುದೆಂತೆನೆ ೧

ಒಂದು ನಾಯ ಹಿಡಿದು ತಂದು
ಅಂದಳವನು ಏರಿಸಿರಲು
ಮುಂದೆ ಅಂದಳ ತಂದು ನೆರೆದ ಮಾಳ್ಕೆಯಾಯಿತು ೨

ಸೊಗಸಿ ಶಿವನ ಮಂತ್ರವನ್ನು
ನೆಗಳಿ ನುತಿಸುದಕ್ಕೆ ಜಿಹ್ವೆ
ವಗಡಿಸುವದು ಕಳ್ಳ ನುಡಿಗೆಯೆಳಸುದೆಂತನೆ

......ಲ್ಲದ ನಾದಂಕ ಜೀವಕೇಳಿ ಈ
ಪೂರ್ಣಚಂದ್ರನ ಪ್ರಭೆಯ ಕಂಡವ....ರು ೪

ವರದ ಬಂಕಾಪುರದ ಆದಿಕೇಶವನೆಡಬಲ
ಗುರುಸೂತ್ರವನಿಂದ.............
ಅರಿವಲ್ಲ ಸ್ಥಿರಬುದ್ಧಿಯಲ್ಲಿ ನಿಂದು ಸಾಧಿಸಿರೊ
ಸಿರಿ ಹಳೆಯ ಕನ್ನಡವನುಂ ನಿಜ
ವರಿತು ಲಿಂಗವನು ಪೂಜೆಮಾಡುವರಾರು ೫

## ೫೨. ಲಿಂಗಪೂಜೊಂದಾಗುತ್ತೈತೆ

ಯಾವಾಗ ನೋಡು ಲಿಂಗಪೂಜೊಂದಾಗುತ್ತೈತಣ್ಣ

ಲಿಂಗಪೂಜೊಂದಾಗುತ್ತೈತ
ಅಂಗಯೆಂಬ ಗುಡಿಯ ಒಳಗೆ
ಕಂಗಳೆಂಬ ಅರಿವು ತಾನು
ಲಿಂಗನಿಗೆ ತೋರುತಿದೆ ॥ ಪಲ್ಲ

ಆರುಮೂರು ಕಟ್ಟಬೇಕಣ್ಣ ಆ ಲಿಂಗಪೂಜೆಗೆ
ಆರುಮೂರನೆ ಮರೆಯಬೇಕಣ್ಣ
ಆರುಮನೆಯ ದಾಂಟಿ ಬಂದು
ಮೂರುನ್ಮನಿಯ ನಟ್ಟ ನಡುವೆ
ಏರಿ ಶಿರದಲಿ ನೋಡುತ
ಭೋರುಗುಟ್ಟು ಕೂಗುತದೆ ೧

ನಾಕು ಹಾದಿ ನಡುವೆ ಐತಣ್ಣ ಆ ಲಿಂಗಪೂಜೆಗೆ
ಮೇಕೆನಾದರ ಕೊಲ್ಲಬೇಕಣ್ಣ
ಕಾಕುಬುದ್ಧಿ ಕಳಿಯಬೇಕು
ನೂಕಬೇಕು ಮದಗಳೆಂಟ
ಜೋಕೆಯಿಂದ ನೋಡಿದರೆ ಅ
ನೇಕ ಬೆಳಕು ಕಾಣುತದೆ ೨

ಯೋಗಿ ಉನ್ಮನಿವಾಸಕಾಣಣ್ಣ ಆ ನಂಬಿದವರಿಗೆ
ಆಗ ಚಿನ್ಮಯರೂಪು ಕಾಣಣ್ಣ

ಆಗ ಈಗಯೆನ್ನದೆ ದಾ
ವಾಗ ನೋಡುತ್ತಿರಲು
ಹೋಗುವ ಗಂಗಾಧರನ
ಬೇಗ ನೆನಹು ಪಾಲಿಸಯ್ಯ ೩

## ೫೩. ಪಾದವ ಕಂಡು ಬದುಕಿದೆ

ನೀವೇ ಗತಿಯೆನಗೆ ಸಾಂಬಶಿವ
ನೀವೇ ಪತಿಯೆನಗೆ ॥ ಪಲ್ಲ

ಚಿಕ್ಕಂದು ಮೊದಲು ನಾನು ನಿಮ್ಮಯ ತೋಳ್
ತೆಕ್ಕೆಯೊಳಾಡುತಿದ್ದೆನು
ಅಕ್ಕರದಿನದೊಳು ಅಮೃತಾನ್ನವ ನೀಡೆಂದು
ಚಿಕ್ಕನೆ ನಿಮ್ಮ ಪಾದವ ಕಂಡು ಬದುಕಿದೆನು ೧

ಒಲಿವೆನು ಮುಖದಿ ನಾನು ನಿಮ್ಮನು ಬಹು
ತೊಳಲಿ ಬಳಲಿಸಿದೆನು
ಕೆಲಕಾಲಯೆನ್ನನು ಕಾಡದಿರೆನುತಲಿ
ಸಲೆ ನಂಬಿದೆ ನಿಮ್ಮ ಚರಣಕಮಲವ ೨
ಜನರೊಳು ಸ್ಮರಣೆಯಿಂದ
ಎನಗೆ ಇಷ್ಟೊಂದನುಮಾನವಾಗುತಿದೆ
ಮನಸಿಜಮದಭಂಗ ಮರೆಯಲಾರೆನು ಲಿಂಗ
ಚಿನುಮಯಾತ್ಮಕ ಗುರು ಮಲೆಯಮಾದೇಶ್ವರ ಲಿಂಗ ೩

## ೫೪. ಋಣವ ಪರಿಹರಿಸೊ

ಋಣವೆಂಬ ಪಾತಕವು ಬಲುಬಾಧೆಬಡಿಸುತಿದೆ
ಗುಣನಿಧಿಯೆ ನೀಯೆನ್ನ ಋಣವ ಪರಿಹರಿಸು ॥ ಪಲ್ಲ

ಕೊಟ್ಟ ದೊರೆಗಳು ಬಂದು ನಿಷ್ಠೂರವನು ಮಾಡಿ
ಕೆಟ್ಟು ಬೈವರು ತಮ್ಮ ಮನದಣಿಯಲು
ದಿಟ್ಟತನವನು ಬಿಟ್ಟು ಕಳೆಗುಂದಿದೆನಯ್ಯ
ಸೃಷ್ಟಿಗೊಡೆಯನೆಯೆನ್ನ ಋಣವ ಪರಿಹರಿಸೊ ೧

ಒಡಲ ಹಸಿವಿಗೆ ಪರರ ಒಡವೆಗಳನು ತಿಂದು
ಭಿಡದ ವೆಚ್ಚವ ಮಾಡಿ ಸಂತೋಷಪಡುವೆ

ಕೊಡುವೊ ವೇಳೆಗೆ ಅವಗೆ ಕಡುನುಡಿಗಳ ನುಡಿವ
ಕಡುಪಾಪಿಯರ ಮನವ ಕಡೆಹಾಯಿಸಯ್ಯ ೨

ಹರಿವಹಾವನು ತಂದು ತಲೆಗೆ ಸುತ್ತಲಿಬಹುದು
ಉರಿವಉರಿಯೊಳು ಹೊಕ್ಕು ಹೊರಡಬಹುದು
ಧರೆಯೊಳಗೆ ಋಣದವನ ಜೈಸಲಳವಲ್ಲ
ಮುರಿವ ಮಾಳಿನಿಯ ಕೈಯಾಂತು ನಿಲಿಸಬಹುದು ೩

ಹೆತ್ತಸೂತಕವು ಹತ್ತು ದಿವಸಕೆ ಹರವು
ಮೃತ್ಯುಸೂತಕವು ಹನ್ನೊಂದು ದಿವಸಕೆ ಹರವು
ಮತ್ತೆ ರಿಣಸೂತಕವು ಜನ್ಮಜನ್ಮಾಂತ್ರಕೆ
ಈ ತೆರದ ಸೂತಕವು ಹತ್ತಿಕೊಂಡಿಹುದು ೪

ಅವನ ಒಡವೆಯ ತಂದು ದಾನಧರ್ಮವ ಮಾಡೆ
ಅವನಿಗಲ್ಲದೆ ಪುಣ್ಯ ಇವನಿಗುಂಟೆ
ಅವನ ಒಡವೆಗಳಿಂದೆ ತೀರ್ಥಯಾತ್ರೆಯ ಮಾಡೆ
ಇವನ ಜೀವನವು ಬಾಡಿಗೆಯಾಹಂತೆ ೫

ಹೇಳಿದೊಡೆಯನ ಮಾತು ಕೇಳಿ ನುಡಿಯಲಿಬಹುದು
ಊಳಿಗವ ಮಾಡಿ ಮನ ದಣಿಸಬಹುದು
ಕಾಳಗದೊಳಗೆ ಹೊಕ್ಕು ಕಡಿದಾಡಿ ಜಯಿಸಲಿಬಹುದು
ಪೇಳಲಳವಲ್ಲ ಋಣದವಗೊಂದು ನುಡಿಯ ೬

ಬಂಧುಬಳಗದ ಮುಂದೆ ಬಹುಮಾನಗಳು ಹೋಗಿ
ಎಂದಳಿವದೋಯೆನುತಯೀ ಋಣವಿದು
ಇಂದುಧರ ಅರಸು ಶ್ರೀ ವಿರೂಪಾಕ್ಷಲಿಂಗ
ಇಂದೆನ್ನ ಋಣವ ನೀನು ಪರಿಹರಿಸು ೭

## ೫೫. ಕೋಲು ಕೋಲೆನ್ನಿ

ಕೋಲು ಕೋಲೆನ್ನಿರೊ ಶ್ರೀ ಗುರುವಿನ
ಕೋಲು ಮೇಲೆನ್ನಿರೋ ॥ ಪಲ್ಲ

ನಾದ ಬಿಂದು ಕಳೆಯ ಆದಿಯ ತಿಳಿದರೆ
ಭೇದಬುದ್ಧಿಗಳು ಬೆರೆಯವು। ರನ್ನದ ಕೋಲು ಕೋಲೆನ್ನಿರೊ ೧

ನಾಳ ತಿಂಗಳ ಮಧ್ಯನಾಳವ ತಿಳಿದರೆ
ಕಾಳಿನ ಉಪಮಾಯ ಕಳೆದೇವು। ರನ್ನದ ೨

ರಂಡೆಯ ಹೊಟ್ಟೆಲಿ ಪುಂಡರೈದು ಮಂದಿ
ಹೆಂಡರನಾಳೆ ಹೆಸರಿಲ್ಲ। ರನ್ನದ ೩

ಗುರುವಿಗೆ ನುಡಿಯಿಲ್ಲ ಗರುಡಕೆ ನಡೆಯಿಲ್ಲ
ಗುರುಭಕ್ತರಿಗೆ ಕುಲವಿಲ್ಲ। ರನ್ನದ ೪

ಗುರುವಿನಾಟವ ಗುರುಭಕ್ತರು ಬಲ್ಲರು
ನರರೇನು ಬಲ್ಲರವರ ನುಡಿ। ರನ್ನದ ೫

ಹಾದಿ ಹತ್ತಿದ ಮಂದಿ ಹದಿನಾರು ಸಾವಿರ
ಭೇದಿಸಿ ನೋಡಲಲ್ಲಿ ಹಾದಿಲ್ಲ। ರನ್ನದ ೬

ಸಾಸಿವೆಕಾಳಿನೊಳು ಸಾವಿರ ಬ್ರಹ್ಮಾಂಡ
ನಾಸಿಕದೊಳಗೆ ನಡೆವರು। ರನ್ನದ ೭

ಕಣ್ಣಿಲ್ಲದವ ನೋಡಿ ಕಾಲಿಲ್ಲದವ ಓಡಿ
ಉಣ್ಣಬಾರದ ಮನೆಯಲುಂಡರು। ರನ್ನದ ೮

ತನ್ನ ತಾನೇ ತಿಳಿದು ಸನ್ನುತದಿ ನೋಡಲು
ಚಿನ್ಮಯರೂಪಕ ಬಾರೋ। ರನ್ನದ ೯

ಹಕ್ಕಿಗೆ ರೆಕ್ಕಿಲ್ಲ ಹಾರಿತಾಕಾಶಕ್ಕೆ
ಹಕ್ಕಿಯ ಹೆಸರ ಹರ ಬಲ್ಲ। ರನ್ನದ ೧೦

ಪ್ರಣವಾಲಯದೊಳು ಮನವ ನಿಲಿಸಿ ನೋಡ
ಪ್ರಣಮಗೋಚರನ ಪ್ರತ್ಯಕ್ಷ। ರನ್ನದ ೧೧

ವರ ಗುರುಮೂರುತಿ ಶ್ರೀ ವಿರುಪಾಕ್ಷನ ಪಾದವ
ನೆರೆನಂಬಿದ ನೀರೆ ನಿತ್ಯ ವೈಭವ। ರನ್ನದ ೧೨

ರನ್ನದ ಕೋಲು ಕೋಲೆನ್ನಿರೋ
ಶ್ರೀ ಗುರುವಿನ ಕೀಲು ಮೇಲೆನ್ನಿರೊ

## ೫೭. ಗಳಿಗೆ ಬಿಟ್ಟಿರಲಾರೆ

ಗಳಿಗೆ ಬಿಟ್ಟಿರಲಾರೆನೋ ಲಿಂಗಯ್ಯನ
ಗಳಿಗೆ ಬಿಟ್ಟಿರಲಾರೆ ನಳಿನಾಕ್ಷಿ ತೋರೆನ್ನ
ಗಳಿಲನೆ ಕರೆಕೊರಳನ ಮಹದೇವನ ॥ ಪಲ್ಲ

ಮುಖವೈದು ಮೂರುಳ್ಳನ.... ಮುರದೊಳು ನೇತ್ರನ
ಮುಕ್ಕಣ್ಣ ಪರಶಿವನ ಸತಿಯರಿಂಬಗೊಲಿದ
ಸಕಲ ಭೂತೋತ್ತಮನ ಕರತಾರಲಾರೆಯ
ಏಕಾಂತದೊಡೆಯನ ಸೂಕ್ಷ್ಮದೊಳಿರುವಾತನ
ಸುಖಾಕ್ಷಿಗೆ ಸಾಕ್ಷಿ ಸಂಚರ ಚಂದ್ರನ ಮೆರೆವನ
ಅಕ್ಷರದೋಂ ಮೊದಲಕ್ಷರ ತಾನಾದ
ಅಕ್ಷರ..... ದ್ಯೊದೊಳು ನಾ ಕಾಣದಿರಲಾರೆ
ಇನಕೋಟಿಪ್ರಭೆಯುಳ್ಳನ ಮನುಮುನಿಜನ
ಪ್ರಕಟದೊಳು ರಾವತ ನಗ್ನ ಸುಜ್ಞಾನಂ ನಿಲದಾತನ
ಮನೆಯೊಳು ಶೂನ್ಯವೀಪರಿಪೂಜೆ ವಿರುಪಾಕ್ಷನ

## ೫೭. ಸರಿಯಾರು ನಿನಗೆ

ಸರಿಯಾರು ನಿನಗೆ ಕೇಳ್ ಗುರುರಾಯಮೂರ್ತಿ
ಸರಸಿಜೋದ್ಭವ ವಂದ್ಯ ಗುರುಚಕ್ರವರ್ತಿ ॥ ಪಲ್ಲ

ಇಷ್ಟಲಿಂಗದ ಮೇಲೆ ದೃಷ್ಟಿಯ ನಿಲಿಸಿ
ನೆಟ್ಟನೆ ತ್ರಿಪುರವ ನೆಲದೋರಿ ಬಿಡಿಸಿ
ದೃಷ್ಟಿಯ ಗೋಚರವಿಲ್ಲದ ಪ್ರಭೆಯೊಳು
ನೆಟ್ಟನೆ ನೋಡುತ ನಲದಿಯ ಮನೆಯೊಳು
ಗಟ್ಟಿಮಾಡಿಸಿ ಕರಣೇಂದ್ರಿ(ಯ)ಗಳ ೧
ಸುಟ್ಟುರುಹಿ ಘನಸುಖಪದವೀತಳಕೆ

ಪಂಚಮುಖ ಪಂಚಕಳೆ ಪಂಚಶಕ್ತಿಗಳ
ಪಂಚವಿಂಶತಿ ತತ್ವ ಜಾಪ್ಯವೆಂದದ ಹೇಳದೀ
ಪಂಚಾಕ್ಷರಿಯನು ಮುಂಚಿತ ಭಾವವ
ಮಿಂಚಿಬೆಳಗೆ ವರಗಾಗಿ ತಿರುಗುತಿಹ ಪ್ರ

ಪಂಚವನೆಲ್ಲವ ಭೇದಿಸಿ ಮನದೊಳು
ಸಂಚಲ ಬಿಡಿಸಿ ನೀ ಚಿಂತೆಯನಿತ್ತೆ ೨

ಅಷ್ಟಮದಂಗಳನುರುಹಿಸಿ ಬೇಗ
ಭ್ರಷ್ಟಮಾಡುವ ಸಪ್ತವೆಸನಂಗಳುರುಹಿ
ಅಷ್ಟಮದವು ತನ್ನ ನಿಷ್ಠುರಗಳನು ಮೆಚ್ಚಿ ತಾಸುರುಚಿರ
ನಿಷ್ಠೆಯ ನೋಡುತ ಅಷ್ಟಜ್ಯೋತಿಗಳ
ದೃಷ್ಟಿಸಿಕೊಂಡು ಮನ
ಶ್ರೇಷ್ಠನಾಗಿ ಮೈಮರೆದನು ಗುರುವೆ ೩

ಆಧಾರ ಮೊದಲಾದ ಆರುಸ್ಥಾನಗಳ
ಆದಿಗುರು ಚನ್ನಮಲ್ಲೇಶ ಕರುಣಿಸಿದ
ಆಧಾರ ನೆಲೆಗದು ನಿತ್ಯವದು
ಸಾಧಿಸಿ ಸಕಲ ಉಪಾಧಿಗಳೆಲ್ಲವ
ನೀದು ನಿತ್ಯವದು ಸತ್ಯಕದುದಕದ ನಿಲಯನು
ಬೀದಿಯೊಳಗೆಸೆವಂ ಶಿವನೆನುತ ೪

ನಾದಮಯನಾದ ಬ್ರಹ್ಮವನೆ ಸೇರಿ
ಆದಿ ಅನಾದಿ ಲಿಂಗೈಕ್ಯವ ತೋರಿ
ಸಾಧಿಸಿ ಸಕಲವು ಭೇದಿಸಿ ಮನದೊಳು
ಸಾಧಕದಿಂದಲಿ ಸಹಸ್ರಕಮಲವು
ನಾದಮಯನು ಶ್ರೀ ನಂಜುಂಡೇಶನ
ಭೇದವಿಲ್ಲದೆ ಬೆರಸಿದ ಕರುಣೆಸಿ ೫

## ೫೮. ಎಲ್ಲರಿಗಹುದೆ

ಯೋಗಸಾಧ್ಯವು ಎಲ್ಲರಿಗಹುದ ಶಿವ
ಯೋಗಿಮಕ್ಕಳು ಶಾಂತನೊಳು ಅನುಗೂಡಬಲ್ಲವಗಲ್ಲದೆ ॥ ಪಲ್ಲ

ಸಿದ್ಧಾಸನ ಪದ್ಮಾಸನವನು ಬಲಿದು ಮನ
ಬುದ್ಧಿಸೂಸದೆ ರೇಚಕ ಪೂರಕ ಕುಂಭಕದೊಳು
ಅರ್ಧಚಂದ್ರಾಕಾರ ಜ್ಯೋತಿಯೊಳಗೆ
ಇದ್ದ ಶಶಿರವಿ ಬೆಳಗಿನೊಳಗೆ ಹೊದ್ದಿಕೊಂಡಿಹಗಲ್ಲದೆ ೧

ಆರು ಚಕ್ರದಳ ವರ್ಣದ ದೇವತೆ
ಆರು ಲಿಂಗಕೆ ಆರು ಹಸ್ತದಿ
ಆರು ರುಚಿಗಳನೀವುತ
ಆರು ಚಕ್ರದ ಮೇಲಣ ಕರ್ಮ್ಮಲರ
ಹೀರಿ ಅಮೃತವ ಸವಿದು ಮೋಕ್ಷದಾರಿ ಹಿಡಿದವರ್ಗಲ್ಲದೆ ೨

ಬಂದು ನಿನ್ನಯ ರೂಪನೆ ಮಾಡೆ
ಚಂದ್ರಸೂರ್ಯ ಬೆಳಗಿನೊಳು ನಡಸುತ
ಚಂದಚಂದದಾನಂದ ಪೊಳೆಯಲಿ
ಬಂದ ತ್ರಿವಿಧವನಳಿದು ಪರಮಾನಂದವಾದಗಲ್ಲದೆ ೩

ಕುಂಡಲಿಯನು ಕಡೆಗೊತ್ತಿ
ಕೊಂಡಿಯನೇರಿ ಮಂಡಲತ್ರಯ ಮಧ್ಯದೊಳು ಅ
ಖಂಡ ತೇಜೋಮೂರ್ತಿಯ
ಉಂಡು ಉಣದುರಿಯುತಿರ್ಪ ಜ್ಯೋತಿಯ
ಕಂಡು ಮಲ್ಲಪ್ರಾಣದೊಳು ಬೆರಗೊಂಡ ಮಹಿಮಂಗಲ್ಲದೆ ೪

ಎನ್ನಂಗ ಗುಣವನೆಲ್ಲ ಲಿಂಗಮುಖವ ಮಾಡಿ
ಅಂಗ ಲಿಂಗ ಸಂಗ ಪರಮಾನಂದವನು ಅನುದಿನ ನಡೆಸುತ್ತ
ಮಂಗಳಾತ್ಮಕ ಪ್ರಸನ್ನ ನಂಜುಂಡನ
ಬೆಡಂಗಿನಿಂದಲಿ ಕೂಡಬಲ್ಲೆಲೆ ಆರೂಢಮಹಿಮಂಗಲ್ಲದೆ ೫

## ೫೯. ತಾಳಲಾರೆನೆ

ತಂದು ತೋರೆ ಜ್ಯೋತಿರ್ಮಯನ ॥ ಪಲ್ಲ
ತಾಳಲಾರೆನೆ ಜ್ಞಾನಸಖಿ

ಆದಿಮೂಲಾಧಾರನ
ನಾದಶಬ್ದ ಓಂಕಾರನ
ಸಾಧು ಸಜ್ಜನ ಶಾಂತನ ೧
ವೇದ ವೇದ ವಿನೋದನ

ಭವಭವದಿಂದವನನು
ಬಹಳ ನೆರೆನಂಬಿದೆನು

ಬಯಸಿಯಾತನ ಭೋಗವನು
ಶಿವಶಿವ ಕೂಡಿ ಬೆರದೆ ನಿನ್ನನು ೨

ಆರಿಗು ಸಾಧ್ಯವಾಗದನ
ಆನಂದಮಹಿಮೋಂಕಾರನ
ಗರಳನಗರಾಧೀಶನ
ಸಿದ್ಧಯೋಗಿ ಪ್ರಾಣಲಿಂಗೇಶನ ೩

## ೬೦. ಸಲಹೋ ಬಸವಯ್ಯ

ಯಾಕೆ ಕೃಪೆ ಮಾಡಲೊಲ್ಲೆ ಬಸವಯ್ಯ ನಿಮ್ಮ(ನ)
ನೇಕಕಾಲ ಭಜಿಸುತಿರ್ದೆ ಬಸವಯ್ಯ ॥ ಪಲ್ಲ

ಬೇಡುವೆನೊ ನಿಮ್ಮ ನೋಡ ಬಸವಯ್ಯ
ಕಡೆ ಬಾಳುವಂತೆ ಮಾಡು ಬಸವಯ್ಯ
ಕಾಡಬೇಡ ಕಾಯ್ವೆಯೆನ್ನ ಬಸವಯ್ಯ ಬೊಂಬೆ
ನಾಡಿಸುವ ಸೂತ್ರಧಾರಿ ಬಸವಯ್ಯ ೧

ಕನ್ನೆಪ್ರಾಯ ಮೀರುತದೆ ಬಸವಯ್ಯ ನಿಮಗೆ
ಮನ್ನಣೆ ಮತ್ತಿಲ್ಲವೇನೊ ಬಸವಯ್ಯ
ಎನ್ನವಗುಣವ ನೋಡುವರ ಬಸವಯ್ಯ ಕಯ್ಯ
ಕನ್ನಡಿಯು ಮಾಳ್ಪಂತೆ ಚೆಲ್ವ ಬಸವಯ್ಯ ೨

ಸಚ್ಚಿದಾನಂದ ಸ್ವರೂಪ ಬಸವಯ್ಯ ನಿಮ್ಮ
ಮಚ್ಚಿಸುವೆನೆಂತು ನಾನು ಬಸವಯ್ಯ
ರಚ್ಚೆಗಿಕ್ಕಿ ಮುನಿವರೇನೊ ಬಸವಯ್ಯ ಮನದ
ಅಚ್ಚುಗವ ಬಿಡಿಸಿ ಸಲಹೊ ಬಸವಯ್ಯ ೩

ಬಿಡದೆ ನಂಬಿ ನೆನವುತಿರಲು ಬಸವಯ್ಯ ಶಿವನೆ
ಒಡನೆ ಕೊಡುವ ಸಂಪದಗಳ ಬಸವಯ್ಯ
ಜಡಮತಿಗಳ ಕಳೆದು ನಿಮ್ಮ ಬಸವಯ್ಯ ಶರಣರ
ತೊಡರೆಂದೆನಿಪುದೊಂದೆ ತಪವೊ ಬಸವಯ್ಯ ೪

ಶ್ರುತಿಗೆ ತತಿಗೆ ಭೇದ ನೀವು ಬಸವಯ್ಯ ನಿಮ್ಮ
ಸತಿಯಳೆಂದು ರಕ್ಷಿಸಯ್ಯ ಬಸವಯ್ಯ
ವಿತತಲಿಂಗ ಜಂಗಮಕ್ಕೆ ಬಸವಯ್ಯ ತನುವ
ಹಿತವ ಸವೆಸುವಂತೆ ಮಾಡೊ ಬಸವಯ್ಯ ೫

ಮೇರುಗಿರಿಯ ವಿವರಿಸದೆ ಬಸವಯ್ಯ ಮತ್ತ
ಶೂರ ಕಾರಮುಗಿಲಿನಂತೆ ಬಸವಯ್ಯ
ವಾರಿಕುಲವ ವರ್ಣಿಸುವರೆ ಬಸವಯ್ಯ ನಿಮ್ಮ
ಸೇರಿದವಳಿಗೇಕೆ ಕ್ರೋಧ ಬಸವಯ್ಯ ೬

ರಾಶಿದೈವಂಗಳನೊಲ್ಲೆ ಬಸವಯ್ಯ ನಿಮ್ಮ
ದಾಸಿಯೆಂದು ರಕ್ಷಿಸಯ್ಯ ಬಸವಯ್ಯ
ವಾಸಿಪಂಥಯೆನ್ನೊಳೇಕೆ ಬಸವಯ್ಯ
ದೋಷನಾಶ ಕೊಟ್ಟೂರೇಶನೆಂಬ ಬಸವಯ್ಯ ೭

## ೬೧. ಕಾಯೊ ಕಾಯಜರೂಪನೆ

ದೇವರ ದೇವ ಕಾಯೊ ಕಪಾಲಿ ಲೋಲ ಲೀಲ
ಕಾಯೊ ಕಾಯೊ ಕಾಯಜರೂಪನೆ ॥ ಪಲ್ಲ

ಮಂದಮತಿ ಮಾಯಪಾಶಿ ನಾನು ಪಾರ್ವತೀಪತಿಯೆ
ಇಂದು ರಕ್ಷಣ್ಯ ಮಾಡೋ ನೀನು
ಒಂದೊಂದೆಣಿಸದೆ ಕುಂದಪರಾಧವ
ಕಂದುಗೊರಳನೆ ಕಾಮಸಂಹರ ೧
ಚಂದ್ರಶೇಖರ ಶ್ರೀಗಿರಿ ಅಭವ

ಅಕಳಂಕ ಪರಬ್ರಹ್ಮಮೂರ್ತಿ ನಿಖಿಳಾಗಮಸಾರ
ಸಕಳಮುನಿಗಳಿಗೈಕ್ಯ ಕೀರ್ತಿ
ಪ್ರಕಟಿತ ಘನಗುರುಚರಿತ ವಿದೂರನೆ
ಮಕ್ಕರಕುಂಡಲ ಮಣಿಮಯ ಸಲೀಲನೆ ೨
ಶಿಖರಸಿಂಹಾಸನ ಶ್ರೀಗಿರಿ ಅಭವ

ಪಂಚತ್ರಿನೇತ್ರ ಪಂಚವಕ್ತ್ರ ಪ್ರಪಂಚ ಪರಿವ
ಪಂಚಭೌಕ್ತಿಕವರಿವ ಅಭವ
ಸಂಚಲ ಕರಣಂಗಳ ಪರಿಸಿ ನಿ
ರ್ಮಿಂಚಿತ ಕಾಳೋರಗಫಣಿಭೂಷಿತ ೩
ಪಂಚಾಕ್ಷರಿಪ್ರಿಯವಿಷ್ಟಲಿಂಗೇಶ

## ೬೨. ಗುರು ತಾನೆ ಸಾಕುವನು

ಶಿವನೆ ತಾನು ಸಾಕುವನು ಮೂರುಲೋ
ಕವನೆಲ್ಲ ಗುರುತಾನೆ ಸಾಕುವನು ॥ ಪಲ್ಲ

ಬಡಿವಾರನಾಡದಿರೂ ಹುಚ್ಚು ಮಾನವ ನೀನು
ಕಡೆಯಲಿ ನುಡಿಯದಿರೊ ನಿನ್ನಿಂದಾಗುವದೇನೊ
ಬುಡಹೋದ ಮಡಕೆಯಂತ ತನುವಿನ ನೆಚ್ಚಿಕಿನ್ನೇನು
ಉಡುವಲ್ಲಿ ಉಂಬಲ್ಲಿ ಕೊಡುವಲ್ಲಿ ಕೊಂಬಲ್ಲಿ ಎನ್ನ
ಒಡೆಯ ಹೊರತುಯಿನ್ನಿಲ್ಲ ೧

ಹಳೆಹಳೆ ಹಚ್ಚಿಕೊಂಡು ಬರಿದೆ ದಣಿಯಲಿಬೇಡ
ತಿಳಿಲಿಕ್ಕಿದರಿಂದಲಿ ತರ್ಕ ಮಾಡೋರೆ ಮೂಢ
ಕಳವಳದಿಂದಲಿ ಕಳವಳಕ್ಕೊಳಗಾಗಿ ಕಾಲ
ಕಳೆವದುಯಿದು ಉಚಿತವಲ್ಲ ೨

ಇನ್ನಾರೆ ಎಚ್ಚರಿಂದ ಎಲ್ಲ ಶಿವನೆಂದು ಬಗೆಯೊ
ಭಿನ್ನ ಭಾವಗಳೆಂಬ ಮನದ ಮೈಲಿಗೆ ತೊಳೆಯೊ
ತನ್ನನೀ ಗುರುರಾಯಗೆ ಕರಕಮಲವ ಮುಗಿಯೊ
ಬಿನ್ನಾಣದಿಂದಲಿ ತನ್ನೊಳು ತಳೆದು
ಜ್ಞಾನಬೋಧನ ಪ್ರಭು ಬಲ್ಲ ೩

## ೬೩. ಗರತಿಯಾಗಿರಬಾರದೆ

ಬಾಲಸಂಗಯ್ಯನ ಮುಕ್ತಿಶ್ರೀಪದರೇಣು
ಹೋಲದೀತರನಾದ ಕೀಲುಕುಂಡಲಿ ನೋಡಿ
ಮಾಲೆಜಪವ ಮಾಡ ಲೀಲ ಹೆಚ್ಚಿದರೇನು ಮೇಲೆ ಕಾಣಿಸುವರೆ
ಧೂಳನಾರಿಗೆ ತೋರುರೆ ಮನವೆಂಬ ಮಾನಿನಿ
ನೀಲಕುಂತಳ ಜ್ವಾಲೆಯಿಲ್ಲದೆ ವಾಲೆ ನಿಲ್ಲಿಸ
ಶೂಲಿ ಲಿಂಗದಿ ನೆಲಸಿ ನುಡಿ ಮೂಲಮಂತ್ರವ ಜಾಲ ಮಾಡಿರಬಾರದ ॥ ಪಲ್ಲ

ನೀರೆ ನಡತೆಯಲ್ಲವೆ ನೋಡಿದ ಶರಣರು ಕೂಗಿಪವಲ್ಲವೆ
ಮೂರು ಭ್ರಮಿಸ ಮಚ್ಚರ ಗರ್ವದಿ

ಆರುವರ್ಗವ ನಚ್ಚರೆ ಭೂರಿಬುದ್ಧಿಗಳಿಂದ ಸಾರ ಸುಪ್ತಭಕ್ತಿ ಮಾಲೆಯೊಳಿರು ನೀ
ನೂರುವಂದು ವಿಚಾರಸ್ಥಲಗಳ
ಸೇರಿಯೈಕ್ಯದೊರೆಯಿಲ್ಲದೆ
ದೂರು ಹೊಂದದೆ ಆರು ಅರಿಯದೆ ತೀರಿನಲ್ಲಿನ್ನಿರಬಾರದ ೧

ಬನಿತೆ ಭಕ್ತರುಯೆಂಬರೆ ತಾನೆಂಬು
ದಿನಿಯ ವಲ್ಲಭೆ ಭೂರಿತನುವಿದ್ದ
ರನುತಪ್ಪಿ ಅದಾರಿಂದ ಅವರು ಸಾಧಕದ ನಪ್ಪ ಅನುಭಾವದಿಂ ಲೋಕ
ವಿನಿತು ಕೇಳಿ ಒಮ್ಮನದಿ ನೀನಿರಲಾರೆಯಾ
ವನಜಭವ ನೀ ಘನವನರಿಯದೆ ಜನನ ಮರಣದಿ
ಮನುಜರಂದದಿ ಜಿನುಗುತಿಹರೆಂದೆನುತ ಬಲ್ಲ ಇನಿತರೊಂದಿರಬಾರದೆ ೨

ತರಳೆ ದೂಷಣೆಯಲ್ಲವೆ ದುರ್ಲಿಖಿತವ
ನೊರಸಿ ತಾ ಭೂಷಣವಲ್ಲವೆ
ಕರಣ ತೊಡಕನು ತಿದ್ದಿ ಕಿಂಕುರ್ವಾಣ ಸರಸಿಯೊಳ್ಮನ ಸ್ಥಿರ ವಿರೂಪಾಕ್ಷನ
ಮರವ ಮುತ್ತಿನಪೆಂಡ್ಯಗುರು ಶಂಕರೇಶ್ವರನ
ಕರಜಾತ ಕಿರಿಯಜಡೆಯ ಮರಳುಸಂಗಯ್ಯ
ನಿರುತವಾತನ ಚರಣವೆರಡರ ಮರೆಯೊಳಿರು ನೀ ನಿರುತ ನಂಬಿ ಗರತಿಯಾಗಿರಬಾರದೆ ೩

## ೬೪. ಬ್ರಹ್ಮದೊಳ್ ಬೆರೆವದು

ಯೋಗಿಗಳ ಲೀಲಾಪಥವಿದು ಎಸೆವ ಶಿವ ॥ಪಲ್ಲ
ಯೋಗಿಗಳ ಲೀಲಾಪಥವಿದು

ಭ್ರಾಂತವಳಿದು ಚಿಂತೆ ಮರದು
ಮಂತ್ರಮೂಲ ಮೊದಲೆ ತಿಳಿದು
ಅಂತರಂಗದಲ್ಲಿ ಕೀಲ ನಿಂತುಕೊಂಡು ತನಗೆ ಬರುವ
ಅಂತಕಾಲ ಮರಣ ತಿಳಿವದು ಈ ಬ್ರಹ್ಮಬೋಧ
ಮಂತ್ರಮೂರ್ತಿಯಾಗಿ ನಿಲ್ಲುವದು ೧
ಕಂತುಹರನ ಪದದೊಳನಂತ ಕಾಲ ಬಾಳ್ವದು

ಮಂದಮರುತ ಯೋಗದಿಂದ
ಚಂದ್ರಸೂರ್ಯರೊಂದುಗೂಡಿ

ಚಂದ್ರ ಸಿದ್ಧಪೀಠದಲ್ಲಿ ಮುಂದೆ ಮೂರು ಕೂಟದಲ್ಲಿ
ಚಂದ್ರಶಿಲೆಯ ಕಂಡ ಕಣ್ಣ...ಕ್ಷ
ದಿಂದ ಒಳಗೆ ಹೊರಗೆ ನೋಳ್ಪುದ
ಚಂದ್ರಧರನ ಪಾದದೊಳು ಅನಂತಕಾಲ ಬಾಳ್ವುದು ೨

ಆದಿಸ್ವರದ ಮಧ್ಯದಲ್ಲಿ
ಭೇದದಿಂದ ಮಡಹನಿಟ್ಟು
ಐದುವದನದಲ್ಲಿ ಪವನ ಸುರುಳಿಗೊಂಡು ರಂಧ್ರದಲ್ಲಿ
ನಾದದಿಂದ ಕೂಗಿ ಮರವದು ಈ ಮಂತ್ರವನು
ಓದಿಕೊಂಡು ಜಪವ ಮಾಳ್ಪುದು
ಆದಿ ಅಂತ್ಯಯಿಲ್ಲದೆ ಹಾಗೆ ಬ್ರಹ್ಮದೊಳಗೆ ಬೆರವದು ೩

ಉತ್ರಬಾಗಿಲಲ್ಲಿ ಚೆನ್ನ
ಚಿತ್ರಕಣ್ಣ ತೆರೆದು ನೋಡೆ
ಮುತ್ತು ಪವಳ ಚಿನ್ನ ಚಮ್ಮ ರತ್ನಗಿರಿಗಳೊಂದು ಕೋಟಿ
ಮೊತ್ತ ಮೊತ್ತವಾಗಿ ಕಾಣುವೀ ಸೂರ್ಯಚಂದ್ರ
ಮತ್ತೆ ಕೋಟಿಪ್ರಭೆಯದೋರ್ವುದು
ಸತ್ತು ಹುಟ್ಟಿ ಬಾರದ ಹಾಂಗೆ ಬ್ರಹ್ಮದೊಳ್ ಬೆರವದು ೪

ಹತ್ತು ನಡವ ಹಾದಿಯಲ್ಲಿ
ಸತ್ತಹೆಣನ ಸುಳುಹ ಕಂಡು
ಮತ್ತೆ ಪ್ರಾಣಕಳೆಯ ತುಂಬಿ ನಿತ್ಯಾನಂಧ ಗಂಗೆ ಯಮುನ
ಸಪ್ತಸಾಗರದ್ದು ಮೊರವುದು ಈ ಕದಳಿಪೊಕ್ಕು
ಕತ್ತಲಳಿದು ಬೆಳಗು ಸುರಿವದು
ಮತ್ತೆ ನಾಗಲಿಂಗನೊಳು ನಾದಬ್ರಹ್ಮದೊಳ್ ಬೆರವದು ೫

## ೬೫. ಗುರುವಿನಿಂದಲಿ ಬಂದೆ

ಗುರುವಾದಿ ಅಷ್ಟಾವರಣದ ಮಂತ್ರಕವಿಡಿದು
ಭರದಿಂದ ನುಡಿಯಲಾತನ ಮಾಮೂಕನು ॥ ಪಲ್ಲ

ಗುರುವಿನಿಂದಲಿ ಬಂದೆನು ಗುರುವಿನಿಂದಲಿ ನಿಂದೆನು
ಗುರುಕರುಣದಿಂದ ಕರವನು ಶಿರದೊಳು

ಇರಿಸಲಾಕ್ಷಣ ನಾನು ಬದುಕಿದೆನು ನಿಮ್ಮ ದಯೆ
ಗುರುಬಸವ ಶರಣು ಶರಣಾರ್ಥಿ ಬಿಡದೆ ೧

ಲಿಂಗವೇ ಪರತತ್ತ್ವ ಲಿಂಗವೇ ಪರಮಾತ್ಮ
ಲಿಂಗವೇ ಪರಮ ಕಾರಣರೂಪದಿಂ
ಅಂಗಮನ ಪ್ರಾಣಭಾವಂಗಳೊಳು ನೆಲೆಗೊಂಡು
ಹಿಂಗದಿರ್ಪ ಚೆನ್ನಬಸವಲಿಂಗ ೨

ಜಂಗಮವೆ ಬ್ರಹ್ಮಾಂಡಕೋಟಿ ನವ ಕೋ
ಟಿಗಳಿಗಿಂಬಾದ ಭಕ್ತನ ಪ್ರಾಣವಾದ
ಜಂಗಮವೆ ಮಗುಟ ಬ್ರಹ್ಮಾಂಡ ಕರದಿಂ ಶೂನ್ಯ
ಲಿಂಗವಾಂತ ಪ್ರಭುವೆ ಸಲಹು ನಲವಿಂದ ೩

ಪಾದೋದಕಂ ಪರಬ್ರಹ್ಮವೆಂದೆನಿಸಿತು
ಪಾದೋದಕಂ ನಿರ್ಮಲಾಂಗರೂಪಂ
ಪಾದೋದಕಂ ಸರ್ವಪಾಪಕ್ಷಯಂ ತಾನೆ
ಪಾದೋದಕಂ ಜೀವ ಹೋ ಸಯ್ಯನು ೪

ತತ್ತ್ವಪ್ರಸಾದವಿದು ಸತ್ತ್ವಪ್ರಸಾದವಿದು
ವ್ಯಕ್ತಪ್ರಸಾದವಿದು ಸತ್ಯಪ್ರಸಾದವಿದು
ಸತ್ಯಪ್ರಸಾದವಿದು ತಾನೆ ನಿರುತಂ
ಭಕ್ತಿಪ್ರಸಾದವಿದು ಮುಕ್ತಿಪ್ರಸಾದವಿದು
ನಿತ್ಯನಿಜ ಮರುಳು ಶಂಕರಲಿಂಗವು ೫

ವಿಭೂತಿಯಿಂದಖಿಳ ಜನರ ಪಾಪವಿನಾಶ
ವಿಭೂತಿಯಿಂದ ಸರ್ವ ಜನ ಮುನಿಗಳು
ವಿಭೂತಿಯಿಂದೆಲ್ಲರಂಗ ಪಾವನವಹುದು
ವಿಭೂತಿಯಿಂದವೋವಿಲ್ಲದೇವನು ೬

ರುದ್ರಾಕ್ಷಿಯಿಂದಖಿಳ ಜನನ ಮರಣ ವಿನಾಶ
ರುದ್ರಾಕ್ಷಿಯಿಂದ ಸಕಲ ಪದಗಳಹವು
ರುದ್ರಾಕ್ಷಿಯಿಂದ ಚೇರಮರಾಯ ಬಲ ಸಹಿತ
ರುದ್ರಲೋಕಕ್ಕೆ ಧಾಳಿಯನಿಟ್ಟನು ೭

ಮಂತ್ರ ಮನದೊಳಗೆ ಚಿಂತೆಯಿಲ್ಲದೆ ನೆನೆಯೆ
ಕಂತುಹರ ಶಿವಪದವು ಬೇಗ ಬಹುದು

ಇಂತೆಂಬ ವಚನವಿಡಿದಂತರಂಗದಿ ನಿಲಿಸಿ
ಮಂತ್ರಮಂ ಪದವಿಟ್ಟು ಮಂತ್ರಲಕ್ಷ್ಮಂ ೮

ಇಂತು ಗುರು ಲಿಂಗ ಜಂಗಮ ಶೇಷ ಜಲ ಭಸಿತ
ಮುಂತೆ ರುದ್ರಾಕ್ಷಿ ಪಂಚಾಕ್ಷರವನು
ಸಂತತಂ ಭಕ್ತಿಮುಖದಿಂತರಂಗದಿ ನೆಲಸಿ ಸ್ವ
ತಂತ್ರ ಗುರುಬಸವೇಶಲಿಂಗನಹನು ೯

## ೬೬. ಶರಣ ಹೋ

*ರಾಗ: ಶ್ರೀರಾಗ*

ಕರ್ಪೂರಜ್ಯೋತಿ ಪ್ರಕಾಶ ಹೋ
ನಿಜನಿಷ್ಪತಿ ನಿಜಲಿಂಗ ಶರಣ ಹೋ ॥ ಪಲ್ಲ

ಮದಗಜದಂತೆ ಲಾಲಿಸುವ ಭೇಕನಂತೆ
ಕುಜನಾಟಕ ಮರುಳಂತೆ ತ್ರಿ
ಬುಧಕಾರಣ ದುರ್ಮದವಳಿದಾನಂದ
ವಿಜಯಲಿಂಗಾಂಗಿ ಶರಣ ಹೋ ೧

ಕರ್ಪೂರಕಂಭದ ಮೇಲೆ ಕರ್ಪೂರಮಂಟಪದೊಳು
ಕರ್ಪೂರಜ್ಯೋತಿಯ ಬೆಳಗನೀ ಬೆಳಗ
ಕರ್ಪೂರನಿರ್ಪಣ ಯೋಗಪರ್ಪಣ ಸುಜ್ಞಾನಲಿಂಗ
ಕರ್ಪೂರನಿರ್ಪಣ ಪ್ರಿಯಜಳಸಸ್ಯ ಹೋ ೨

ರತ್ನರತ್ನ ಜೀವದಂತೆ ರತ್ನರತ್ನ ಪ್ರಭೆಯಂತೆ
ರತ್ನಸಿದ್ಧಾಂತ ಕಿರಣದಂತೆ
ರತ್ನಸಂಜೀವನ ರಥಗೂಡಿ ನಲಿವಂತ
ರತ್ನ ಪ್ರಬುದ್ಧ ದಿನಮಣಿ ಹೋ ೩

## ೬೭. ಪರಮಾತ್ಮ ತಾ ಬಲ್ಲ

ಕಾರಣ ಬೇರ‍್ಯಾದೆ ಸದ್ಗುರುವಿನ ಬೋಧ
ನೀ ಬೇರ‍್ಯಾದ ॥ ಪಲ್ಲ

ಭೋರಿಡುತದೆ ತೋರುವದಲ್ಲ
ಮೀರಿದ ಉನ್ಮನಿ ಸೇರಿದವನೆ ಬಲ್ಲ ೧

ಕಂಡವರಿಲ್ಲ ಉಂಡಾತ ಬಲ್ಲ
ಮಂಡೆಯೊಳಗೆ ತುಂಬಿ ತುಳುಕಿ ಸೂಸ್ಯಾಡುತದ(ಲ್ಲ) ೨

ಝಳ್ಳಿಸುತದೆ ತಿಳಿಯಲಿಕ್ಕಿಲ್ಲ
ಪ್ರಳಯಕಾಲದ ರುದ್ರ ಪರಮಾತ್ಮ ತಾ ಬಲ್ಲ ೩

## ೭೮. ನೀನೊಬ್ಬ ದೊರೆಯೆ

ಕರುಣಿಸೊ ದೇವ ಕರುಣಿಸೊ
ಇರುಳು ಹಗಲು ನಿನ್ನ ಸ್ಮರಣೆಯ ಮಾಳ್ಪಂತೆ ॥ ಪಲ್ಲ

ಬಿಸಜಲೋಚನನಂತೆ ಅರ್ಚಿಸಲರಿಯೆ
ಬಸವನಂತೆ ಪೊತ್ತು ಚರಿಸಲರಿಯೆ
ಶಶಿರವಿಯಂತೆ ಸ್ನೇಹವ ಮಾಡಲರಿಯೆ
ಋಷಿಮುನಿಗಳಂತೆ ಜಪ ಎಣಿಸಲರಿಯೆ ೧

ನಾರದಮುನಿಯಂತೆ ಕೀರ್ತಿಸಲರಿಯೆ
ವಾರಿಜೋದ್ಭವನಂತೆ ವಂದಿಸಲರಿಯೆ
ಮಾರನ ಸತಿಯಂತೆ ವರವ ಬೇಡಲರಿಯೆ
ಈರೇಳು ಲೋಕಕ್ಕೆ ನೀನೊಬ್ಬ ದೊರೆಯೆ ೨

ಬಾಣಾಸುರನಂತೆ ಭಜನೆಯನರಿಯೆ
ರಾಣಿ ಪಾರ್ವತಿಯಂತೆ ಅರ್ಚಿಸಲರಿಯೆ
ಜಾಣಗೌತಮನಂತೆ ಶಾಣೆತನ ಅರಿಯೆ
ಪ್ರಾಣೇಶ ಪರಬ್ರಹ್ಮ ತಿಪ್ಪನೊಳ್ಪರಿಯೆ ೩

## ೭೯. ಅವಗುಣ ಬಿಡಲಿಲ್ಲ

ಎಲ್ಲನು ಬಲ್ಲನೆಂಬುವಿರಲ್ಲ
ಅವಗುಣಗಳ ಬಿಡಲಿಲ್ಲ
ಸೊಲ್ಲಿಗೆ ಶರಣರ ಕಥೆಗಳ ಪೇಳುತ
ಅಲ್ಲದ ಓಜೆಲಿ ತಿರುಗುವಿರಲ್ಲ ॥ ಪಲ್ಲ

ಗುರುವಿನ ಸೇವೆಯ ಮಾಡಲಿಲ್ಲ ಗುರುವಾಗಲಿಲ್ಲ
ಪರಿಪರಿ ಹಾಸ್ಯವ ಮಾಡುವಿರಲ್ಲ ಪರವಾಗಲಿಲ್ಲ
ಅರಿವೊಂದರಿಯದೆ ತಾವಂ ತಿಳಿಯದೆ
ಶ್ವಾನನ ಜನ್ಮಕೆ ಬೀಳುವಿರಲ್ಲ ೧

ಕಾವಿಯನುಟ್ಟು ತಿರುಗುವಿರಲ್ಲ ಕಾಮನ ಬಿಡಲಿಲ್ಲ
ನೇಮ ನಿತ್ಯಗಳ ಮಾಡುವಿರಲ್ಲ
ಅರಿವೊಂದರಿಯದೆ ತಾವಂ ತಿಳಿಯದೆ
ನರಕದ ಕುಳಿಯೊಳು ಮುಳುಗುವಿರಲ್ಲ ೨

ಬ್ರಹ್ಮಜ್ಞಾನಿಗಳೆನಿಸುವಿರಲ್ಲ ಹಮ್ಮುವ ಬಿಡಲಿಲ್ಲ
ಸುಮ್ಮನೆ ಯೋಗವ ಮಾಡುವಿರಲ್ಲ ಸುಳಿವಿಡಿಯಲಿಲ್ಲ
ಗಮ್ಮನೆ ಶ್ರೀಗುರುನಾಥ ಚರಣಕೆ
ಯೋಗ್ಯವಾಗಿ ನೀ ಬೆರೆಯಲಿಲ್ಲ ೩

## ೭೦. ಎಚ್ಚರಿಕೆ

*ರಾಗ: ಸೌರಾಷ್ಟ್ರ*

ಬಲ್ಲಿದ ನೀನೆಂದು ಬಡವರ ಬಾಯಿಗೆ ಬಡಿಯದಿರೆಚ್ಚರಿಕೆ
ಎಳ್ಳಷ್ಟು ತಪ್ಪಿದರೆಕ್ಕಲನರಕದೊಳಿಕ್ಕುವರೆಚ್ಚರಿಕೆ ॥ ಪಲ್ಲ

ಮಾಡು ದಾನ ಧರ್ಮ ಪರೋಪಕಾರವ ಮರೆಯದಿರೆಚ್ಚರಿಕೆ
ಕೇಡನೆಣಿಸದಂತಿರು ನೀ ನಂಬಿದರೊಳು ಕೆಡುವೆ ನೀನೆಚ್ಚರಿಕೆ
ಮೂಢರೊಡನಾಡಿ ಮುಂದುವರಿದು ಮುಳುಗಾಡದಿರೆಚ್ಚರಿಕೆ
ನಾಡೊಳು ಸುಜನರ ನೋಡಿ ನೀ ನಡೆ ಮುಂದ ನಟಣೆಬೇಡೆಚ್ಚರಿಕೆ ೧

ಮುನ್ನ ಮಾಡಿದ ಪೂರ್ವಫಲದಿಂದ ಬಂದಿತು ಮುನ್ನದೆ ನೋಡೆಚ್ಚರಿಕೆ
ಬೆನ್ನನೊದೆವ ಯಮದೂತರು ಬರುತಹರೆ ಬೆರೆಯದಿರೆಚ್ಚರಿಕೆ
ಹೊನ್ನು ಹೆಣ್ಣು ಮಣ್ಣು ನಿನ್ನನೆ ವಂಚಿಸಿ ಹೋಗುವದೆಚ್ಚರಿಕೆ
ಚೆನ್ನಾಗಿ ಗಳಿಸಿದೆ ನೀನುಂಡೆನೆಂದೆಂಬ ಚೇಷ್ಟಬೇಡೆಚ್ಚರಿಕೆ ೨

ಬಾಳು ಬದುಕು ಬಲುಸಿರಿ ಪಿತ ಮಾತೆಯ ಬೈಯದಿರೆಚ್ಚರಿಕೆ
ಕಾಲನವರು ಆವಾಗ ಕರೆವರೊ ಕಾಣ್ಬಾರದೆಚ್ಚರಿಕೆ
ಹಾಳು ಬದುಕಿಗಾಗಿ ಹಲವರ ಕೂಡಣ ಹಗೆಯ ಬೇಡೆಚ್ಚರಿಕೆ
ಮೂಲೋಕಪತಿ ಗಿರಿಜೇಶನ ಚರಣವ ಮರೆಯದಿರೆಚ್ಚರಿಕೆ ೩

## ೭೧. ಫಲವೆಂದರಿವುದು

ಮುನ್ನ ಲಿಂಗಾರ್ಚನೆಯ ಮಾಡಿದ ಭುವನದೊಳು
ಮನ್ನಿನಿಯ ಸುದಂಡನಾಯಕ ರಾಜಪ್ರಭುವೆನಿಸಿ
ಸನ್ನುತಾ ಜನದ ಜವ್ವನದ ಸತಿಯರ ಸುವಸ್ತುವಂ ಸವಿಪುತಿಪಸು ॥ ಪಲ್ಲ

ಪನ್ನೀರು ಕಸ್ತುರಿಯು ಸಾದು ಜವ್ವಾದಿಯಂ
ತನ್ನ ಮೈಯೊಳ್ಪೂಸಿ ಮಣಿಖಚಿತಪೀಠದೊಳು
ರನ್ನದಾಭರಣಮಂ ತೊಟ್ಟು ದುಕುಲವನುಟ್ಟು ಸರ್ವಸಂತೋಷದಿಂದ
ಚೆನ್ನೆಯರು ಸುಗುಣಸಂಪನ್ನೆಯರು ಸುರಲೋಕ
ಕನ್ನೆಯರು ನೆರೆದು ಬಂದೋಲೈಸಿ ಬಾಳುವದು
ಮುನ್ನಘಹರನ ಮಸ್ತಕಕ್ಕೆ ಪುಳಕೋದಕವನಿತ್ತ ಫಲವೆಂದರಿವುದು ೧

ಹಂಬಲಿಪ ರಾಯಕುಲ ಸಂತತಿಗೆಯಭಯಮಂ
ನಂಬುಗೆಯ ರಾಯಸಂಗಳನೀವುತಡಬಲೆ
ಯ್ಡಿಂಬಿನಲಿ ಕುಳ್ಳಿರ್ದ ಮನ್ನೆಯರು ಮುಖ ನೋಡಿ ಕೂಡೆ ಕೃಪೆಯಂ ಮಾಡುತ
ರಂಭೆಯೂರ್ವಶಿ ತಿಲೋತ್ತಮೆ ಮೇನಕೆಯರ ಸಮ
ವೆಂಬ ಸತಿಯರು ಮಾತನಾಡುತಲವಾಳುವದು
ಅಂಬಿಕಾಪತಿಯ ನೊಸಲಿಂಗೆ ಶ್ರೀ ಭಸಿತವನ್ನಿಟ್ಟ ಫಲವೆಂದರಿವುದು ೨

ಅಂದಳಂ ಛತ್ರ ಚಾಮರ ನೆಗಳು ನೇಜೆಯವು
ದುಂದುಭಿ ಮೃದಂಗ ಭೇರಿಯರವಂ ಪೊಣ್ಮುತಿರೆ
ಮುಂದೆ ಪೊಗಳುವ ಭಟ್ಟ ನಟುವರುಂ ಗಾಯಕರು ಕವಿ ಗಮಕಿ ವಾಗ್ಮಿಕರು
ಇಂದ್ರನೋ ನಳನೋ ಜಯಂತನೋ ಸತ್ಯಹರಿ
ಶ್ಚಂದ್ರನಂದದಿ ಸಕಲರಾದಿ ಆಳುವದು ಕುಂ
ದೆಂದು ಶಿವಲಿಂಗವೆಸವಂಗೆ ಶ್ರೀಗಂಧವರ್ಪಿಸಿದ ಫಲವೆಂದರಿವುದು ೩

ಅಕ್ಷರಂಗಳೊಳು ಪಂಚಾಕ್ಷರವೆ ಮಿಗಿಲೆನಿಸಿ
ನಕ್ಷತ್ರನೊಳ್ ಚಂದ್ರಮಂಡಲವೆ ತೋರ್ಪ ಶ್ರೀ
ಯಕ್ಷನಣುಗಂ ವೀರಭದ್ರನಂದದಿ ಸುಖದಿ ಸಕಲ ರಾಜ್ಯಂಗೈವುತ
ರಕ್ಷಿಸುತ ಸುಜನರಂ ಶಿಕ್ಷಿಸುತ ದುರ್ಜನರ
ಪಕ್ಷಪಾತಕವಿಲ್ಲದದಟನಿಂ ಬಾಳುವದು
ಅಕ್ಷಯನ ಅಗಣಿತನ ಪಣೆಗೊಮ್ಮೆ ಅಕ್ಷತೆಯನಿಟ್ಟ ಫಲವೆಂದರಿವುದು ೪

ಮನೆಯು ಮಂದಾಸನವು ಮದನಮಂಟಪ ರನ್ನ
ಕನಕಭಂಡಾರ ಬೊಕ್ಕಸ ಚೊಕ್ಕಚಾವಡಿಯು
ಮಿನುಗುವರಮನೆಯ ಎಸೆವ ನಾಟಕಶಾಲೆಯುಪ್ಪರಿಗೆ ಚಪ್ಪರ ಮಾಳಿಗೆ
ವನಿತೆಯರ ಗೃಹರಾಜ ಸಾಲುಭಿತ್ತಿಗಳಿಂದ
ಘನತರದ ಸಾಮ್ರಾಜ್ಯ ನಿಜಸುಖದಿ ಬಾಳುವುದು
ಮನವೊಲಿದು ಶಿವಲಿಂಗ ಕನಕಪ್ರಭಾಳೆಯನಿಟ್ಟ ಫಲವೆಂದರಿವುದು ೫

ವೀರ ವಿತರಣರೂಪು ಗುಣ ಕಾಂತಿ ಯವ್ವನವು
ಸೇರಿತಿವಗೆಂದೆಲ್ಲ ಪುರಜನಂ ಕೊಂಡಾಡೆ
ಚಾರುತರ ವಾಯುವೇಗವನುಳ್ಳ ತುರಗಕುಲ ರಥ ತತಿ ಗಜದ ಮೊತ್ತವು
ಧಾರುಣಿಯೊಳಧಿಕವುಂಟೆಂದೆಂಬ ಸಂತಸದ
ಸೇರುವೆಯನೊಳಕೊಂಡು ನಿಜಸುಖದಿ ಬಾಳುವದು
ಕಾರುಣ್ಯಮೂರ್ತಿ ಶಿವಲಿಂಗದೇವೇಶಂಗೆ ಪುಷ್ಪವರ್ಪಿಸಿದ ಫಲವೆಂದರಿವುದು ೬

ಉಪಮಿಸಲು ಬಾರದೀತನ ಧರ್ಮಕೀರ್ತಿಯಂ
ಅಪರಿಮಿತನಾಗಿ ತುಂಬಿತು ಸತ್ಯಲೋಕಮಂ
ತಪವ ಮಾಡದೆ ಪಡೆದ ನಿಜಕುಬೇರತ್ವಮಂ ಎಂಬ ತ್ರಿಭಕ್ತಿಯರಿದು
ಕುಪಿತನಾಗದೆ ಜಗವ ಲಾಲಿಸುತ ಪಾಲಿಸುತ
ಸುಪಥವರಿದೀ ಭಕ್ತಿಯೊಡನೊಲಿದು ಬಾಳುವದು
ತ್ರಿಪಥಹರ ಗುರುಲಿಂಗಚರಮೂರ್ತಿಗೇಯೊಮ್ಮೆ ಧೂಪವರ್ಪಿಸಿದ ಫಲವೆಂದರಿವುದು ೭

ಹರನಿಂದಲಧಿಕವುಂಟೆಂಬ ದೈವಗಳಿಲ್ಲ
ಗುರುವಿಂದಲಧಿಕವುಂಟೆಂಬಿಹಪರಗಳಿಲ್ಲ
ವರ ಶಾಂತಿಯಿಂದಧಿಕವುಂಟೆಂಬ ತಪವಿಲ್ಲಯೆಂಬ ತ್ರಿಭಕ್ತಿಯರಿದು
ನರಲೋಕಸಾರಾಯವೆಂದೆಂಬ ಕೀರ್ತಿಯಿಂ
ಸುರ ನರೋರಗಸತಿಯರೋಲೈಸಿ ಬಾಳುವದು
ಗರುವ ಗಂಭೀರ ಶಿವಲಿಂಗದೇವೇಶಂಗೆ ದೀಪವರ್ಪಿಸಿದ ಫಲವೆಂದರಿವುದು ೮

ತೊಗೆ ತುಪ್ಪ ಪಾಯಸವು ಶಾಕಪಾಕಾದಿಗಳು
ಮಿಗಿಲೆನಿಪ ಕಜ್ಜಾಯ ಶಾಲ್ಯನ್ನ ಫಲಗಳಿಂ
ನಗುತ ಕೆಲಗ್ರಿತ್ತು ತಾನುಂಡೊಡನೆ ಸತಿಸುತಗ್ರೂಡಿ ಸಂತೋಷದಿಂದ
ಯುಗಯುಗಾಂತರ ಶಶಿಸೂರ್ಯರುಳ್ಳನ್ನಕ್ಕ
ಮೃಗನೇತ್ರಯರ ಸಂಗಹಿಂಗದೇ ಬಾಳವರು
ಜಗದೊಳೇಕೋದೇವನೆಂಬ ಶಿವಲಿಂಗಕ್ಕೆ ನೈವೇದ್ಯವರ್ಪಿಸಿದ ಫಲವೆಂದರಿವುದು ೯

ಸೊಕ್ಕು ಜವ್ವನದ ಸತಿಯರ ಮೇಲೆ ಪದಯುಗವ
ನಿಕ್ಕಿ ಉಂಗುಷ್ಟ ತುದಿಯಲಿ ಕುಚವನಲುಗಿಸುತ
ಅಕ್ಕರಿಂದಮರ್ದಪ್ಪಿ ಮುಖ ನೋಡೆ ಪದತಳವ ಹಸ್ತದಿಂದೊತ್ತಿಕೊಳುತ
ಇಕ್ಕೆಲದ ಸತಿಯರುಂ ಪಾವಾಡದಾ ಪದನ
ಲೆಕ್ಕವಿಲ್ಲದೆ ಪಾಡುತಾಡುತಲಿ ಬಾಳುವದು
ಮುಕ್ಕಣ್ಣಮೂರ್ತಿ ಶಿವಲಿಂಗದೇವೇಶಂಗೆ ತಾಂಬೂಲವರ್ಪಿಸಿದ ಫಲವೆಂದರಿವುದು ೧೦

ಪುಸಿ ಕೊಲೆಯು ಚಾಂಡಾಲ ಪರರರ್ಥವನು ತಿಂಬ
ವೆಸನದ ಮಹಾಕಳವು ದುರ್ಬುದ್ಧಿ ದುಶ್ಚೇಷ್ಟೆ
ಒಸೆದು ಮಾಡಿದ ಪಂಚಮಹಪಾತಕಂಗಳುಂ ಪೋಪವೀ ಶಿವಲಿಂಗದ
ಪೆಸರುಗುಂದದದೆ ಬಿಡದೆ ಎಣಿಸಿದರ್ಚಿಸಿದರ್ಗೆ
ಶಶಿಧರನು ಶಾಂತಮಲ್ಲೇಶ್ವರನು ಬಿಡದೊಲಿದು
ವಸುಧೆಯೊಳಗಾಯುರಾರೋಗ್ಯ ಸಂಪದವೀವನೆಂದು ಡಂಗುರವ ಪೊಯಿದೆ ೧೧

## ೭೨. ಮಹಿಮಗೆ

*ರಾಗ: ರೇಗುಪ್ತಿ*

ಇದ್ದರೇನು ತನು ಬಿದ್ದರೇನು
ಬದ್ಧದಿ ಸದ್ಗುರುಪಾದ ಹೊದ್ದಿದ ಜೀವನ್ಮುಕ್ತಗೆ ॥ ಪಲ್ಲ

ಲೋಕಶಾಸ್ತ್ರ ದೇಹವೆಂಬ ಕಾಕವಸಾನತ್ರಯವ
ನೂಕಿಭವಭಯಗಳನೇಕವ ಮಾಡಿ
ಸಾಕಾರಪೂಜೆಗಳು ಬೇಕೆಂಬ ಆಶೆ ಪರಿದು
ಏಕಮೇವನೆಂಬ ಶ್ರುತಿಶೇಖರನಾದ ಶರಣಗೆ ೧

ಹರಿಹರಬ್ರಹ್ಮಾದಿಗಳ ಪರಿಹರಗುಣದಿ ಕೂಡಿ
ಮುರಿದು ಮದಗಳ ಗರ್ವಮಜ್ಜ ಮಾಡಿ
ನಿರುತದಿಂ ಹಮ್ಮುದ್ರಿತಾಯ ನಿಲ್ಲಿಸಿಂದ್ರಿಯದ ಶಾಖ
ಹುರಿದು ನಾನ್ಯಪಂಥವೆಂಬ ತುರಿಯವರಿದ ಮಹಿಮಗೆ ೨

ಆಸೆಪಾಶಗಳರಿದು ಕ್ಲೇಶವೆಂಬ ಕಾಶಿಗೈದಿ
ಸೂಸುವ ವ್ಯಾಸನ ಕೈಯನು ಸುಟ್ಟೆಂದು
ಈಶ ಸಹಜಾವಧೂತ ವಿಭುವೆಂಬ ಸದ್ಗುರು ಸಾರಿ
ಈಷಣತ್ರಯಗಳೆದು ವಿಭವನಾದ ಮಹಿಮಗೆ ೩

## ೭೩. ಬಾಳ ಭಂಗ ತಪ್ಪದು

ಲಿಂಗಧ್ಯಾನದೊಳಗೆಯಿರಲು ಅರಿವು ತಪ್ಪದು ಹೀನರ
ಸಂಗ ಮಾಡಿದವರಿಗೆ ಬಾಳ ಭಂಗ ತಪ್ಪದು ॥ ಪಲ್ಲ

ಗಂಡನೊಲಿಸಿಕೊಂಡ ಸತಿಗೆ ಲೇಸು ತಪ್ಪದು ಯೋಗ
ಗೊಂಡಮೇಲೆ ಬೇಡಿದಂಥ ಪದವಿ ತಪ್ಪದು ೧

ಉಂಡ ಮನೆಗೆ ಎರಡ ಬಗೆದರೆ ಕೇಡು ತಪ್ಪದು ರಣವ
ಕಂಡು ಓಡಿ ಬರುವೂ ಬಂಟಗೆ ನರಕ ತಪ್ಪದು ೨

ವರ ವಿತರ್ಕ ಮಾಡಿದವರಿಗೆ ಪುಣ್ಯ ತಪ್ಪದು ಅತಿ ಜಾಣ
ಧರ್ಮಗುಣವಿರುತಿರಲು ಕೀರ್ತಿ ತಪ್ಪದು ೩

ಈ ಮರ್ತ್ಯದೊಳಗೆ ಹುಟ್ಟಿದವರಿಗೆ ಮರಣ ತಪ್ಪದು
ಸೋಮಸುರೆಯ ಕುಡಿದ ಮೇಲೆ ಪ್ರೀತಿ ತಪ್ಪದು ೪

ಇತ್ತ ಗುರುಹಿರಿಯರೊಳು ಭಕ್ತಿಯಿರಲು ಮುಕ್ತಿ ತಪ್ಪದು
ಸೋದೆ ಗುರು ನಂದೀಶ್ವರ ನಿಮ್ಮ ಪಾದ ಸೋಕಿದ ಮೇಲೆ ಮುಕ್ತಿ ತಪ್ಪದು ೫

## ೭೪. ಇರುವುದಿನ್ನತಿ ಕಷ್ಟ

ಇರುವುದಿನ್ನತಿ ಕಷ್ಟ ಈ (ಸ್ಥಳದೊ)ಳಗಿನ್ನಿರವುದತಿ ಕಷ್ಟ
ದೊರೆತನದಲಿ ಬಲು ತರಲೆಗಳಿಂದಲಿ
ಕರೆಕರೆ ಹೆಚ್ಚಿತು ಗುರಿಕಾರರ ಸೇರುವುದಿನ್ನತಿ ಕಷ್ಟ ॥ ಪಲ್ಲ

ಘಾತಕ ಜನರಿಂದ ನೂತನ ವ
ರಾತದ ಬಗೆಯಿಂದ
ಧಾತುಗುಂದಿತು ಧನವೆಚ್ಚಗಳಿಂದ ಒಂದು
ಮಾತಿಗೆ ಅವಕಾಶಯಿಲ್ಲಯೀ ಸ್ಥಳದೊಳಗಿರುವದಿನ್ನತಿ ಕಷ್ಟ ೧

ದೊರೆಗಳ ರೀತಿ ಬೇರೆ ಸನ್ನಿಧಿಯ
ಲ್ಲಿರುವ ಮತಿ ಬೇರೆ
ಪರಿಪರಿ ವಿರಹದ ಪಾರುಪತ್ಯಗಳಿಂದ
ಧರೆಯೊಳು ಬಡವರು ದಣಿದರೂ ಶಿವನೆ ೨

ತಾರತಮ್ಯಗಳಿಲ್ಲ ನಿಷ್ಠುರದ ವಿ
ಚಾರ ಮಾಳ್ಪವರಿಲ್ಲ
ಚಾರು ಬುಧರು ನಿರಕ್ಷರಗಾರರ
ಓರಂತೆ ಕೂಡಿ ನಿರಾಕರಿಸುವರೊಳಗಿರುವುದಿನ್ನತಿ ಕಷ್ಟ ೩

ಕಪಟ ಕುಟಿಲ ಕುಹಕ ಮಂತ್ರದ
ನಿಪುಣಜನರ ಗಮಕ

ವಿಪರೀತವಾಯಿತುಯೆನೆಯೆನೆ ತಪ್ಪದ
ಚಪಲಾಕ್ಷಿಯರು ಚಿತ್ತಜಾರಿಯ ಜನರೊಳಗಿರುವುದಿನ್ನತಿ ಕಷ್ಟ ೪

ಹಿಂದೆ ಒಲಿದ ನೀನು ಮತ್ತಗಲಿದೆ
ಮುಂದಕೆ ಗತಿಯೇನು
ಇಂದಿಗು ಮನೆತನ ಕುಂದದೆ ನಡೆವಂತೆ
ಚಂದದಿ ರಕ್ಷಿಸೊ ನಂದಿಕೇಶ್ವರನೆ ೫

## ೭೫. ಮನುಜರಿಗೆ

ಎಲ್ಲಿಗಾದಡೆ ಒಬ್ಬ ಸಹಜ ಶಿವಭಕ್ತ ॥ ಪಲ್ಲ

ದೊಡ್ಡ ಜಂಗಮ ಬರಲು ಅಡ್ಡಡ್ಡ ಬಿದ್ದವರ್ಗೆ
ದೊಡ್ಡ ವಸ್ತುವನಿತ್ತು ಶರಣೆಂಬುದು
ಸಡ್ಡೆಮಾಡದೆ ವಸ್ತ್ರಮುಖವಿಲ್ಲದರ ಕಂಡು
ಅಡ್ಡಮೋರೆಯ ತೆಗೆವಯೆಡ್ಡಮನುಜರಿಗೆ ೧

ಊರೊಳಿರುತಿರ್ಪ ಮಠಪತಿಗೆ ಕೀರ್ತಿಯು ಬಹಳ
ಸಾರಿ ಭಕ್ತಿಯ ಮಾಡಿ ನಮಿಸುತಿರಲು
ದೂರದಿಂದೊರ್ವ ಪರದೇಶಿ ಜಂಗಮ ಬರಲು
ಮೋರೆ ತಗ್ಗಿಸುವ ಕ್ರೂರಮನುಜರಿಗೆ ೨

ದೇಶನಾಮವ ಕೇಳಿ ವೇಷವಿದ್ಯವ ನೋಡಿ
ಆಸೆ ನಿರಾಸೆಯನು ವಿವರಿಸುತಲಿ
ದೇಶನ ಭಕ್ತನೆಂದು ಬೆಬ್ಬನೆ ಬೆರವ
ಹೇಸಿ ಗುಣಗಳನುಳ್ಳ ಕೊಚ್ಚೆ ಮನುಜರಿಗೆ ೩

ಹೊಗಳಿದವರಿಗೆ ಉಬ್ಬಿ ನಲಿದು ಭಕ್ತಿಯ ಮಾಡಿ
ಹೊಗಳದಿರ್ದವರ ಸಾಮಾನ್ಯ ಕಂಡು
ಜಗದೊಳಗೆ ಷಡುರಸಾನ್ನವ ನೀಡುತಿಹೆ ತಿನ್ನೆಂಬ
ನಗುವರಗರಿಯದಯಿಂಥ ವಿಗಡ ಮನುಜರಿಗೆ ೪

ಜಂಗಮವ ಹಿರಿದು ಕಿರಿದೆನ್ನದರ್ಚಿಸುತಿರ್ಪ
ಮಂಗಳಾತ್ಮಕ ಭಕ್ತರಂಗದೊಳಗೆ
ಅಂಗಜನವೈರಿ ಶ್ರೀ ಗುರುಚೆನ್ನಬಸವೇಶ
ಹಿಂಗದಿರುತಿರ್ಪನನುವರಿದುಯೆಡೆವಿಡದೆ ೫

## ೭೬. ಸುಗುಣನೇತಕೆ ಬಾರ

ಸುಗುಣನೇತಕೆ ಬಾರ ಜಗತ್ ಕೀರ್ತಿ ಉದಾರ
ನಗೆಮೊಗದರಸಿ ಬಗೆಯ ವಿಶೇಷ
ವಿಗಡ ಅಸುರರ ನಾಶ ವೀರೇಶ ||ಪಲ್ಲ

ಶಶಿಯ ಸೂಡಿದ ದೇವ
ವಿಷವ ಕಂಠದಿ ತಾಳ್ದ
ಕುಶಲಕೋವಿದ ರನ್ನ
ಭಸಿತಭೂಷಿತ ಚೆಲ್ವ
ಬಿಸಿಯನೇತ್ರದ ರುದ್ರ ರವುದ್ರ ೧

ಮೃಡನ ಮೋಹದ ಪುತ್ರ
ಕಿಡಿಗಣ್ಣ ಶರಭೇಂದ್ರ
ಕೆಡಕೆಡೆಯೆನುವನ
ಪೊಡವಿ ನಡುಗುವಂತೆ
ಘುಡುಘುಡಿಸುವ ರುದ್ರ ರವುದ್ರ ೨

ಹಿಂಡುದೈವದ ಗಂಡ
ರುಂಡಮಾಲ ಉದ್ದಂಡ
ಚಂಡಿ ಚಾಮುಂಡಿಯ
ಮುಂಡ ಮಾರ್ತಾಂಡ
ಕೆಂಡಗಣ್ಣಿನ ರುದ್ರ ರವುದ್ರ ೩

...........
ಶಿಕ್ಷ ಶಿರಭಿನ್ನ
ದಕ್ಷಬ್ರಹ್ಮರನೆಲ್ಲ ನಗೆಗೀಡುಮಾಡಿದ
ಪಕ್ಷ ಶರಭರುದ್ರ ರವುದ್ರ ೪

ಅಷ್ಟದಿಕ್ಕಿಲವಾಸ
ಕೊಟ್ಟೂರ ಶರಭೇಶ
ದೃಷ್ಟಿಪದವಿನಿಟ್ಟವಿಷ್ಟಲಿಂಗೇಶ
ದಿಟ್ಟ ರಾಚವಟ್ಟಿ ವೀರೇಶ ೫

## ೭೭. ಜೋಗುಳ ಪದ

ಜೋ ಜೋ ಕಂದಮ್ಮ
ನೀ ಸುಮ್ಮನೆ ಮಲಗೆ ಕಂದಮ್ಮ ॥ ಪಲ್ಲ

ಹರಹರ ಪರಮಾನಂದನ ತ್ರಿಪುರಸಂಹರ ರೂಪ
ಕೈಲಾಸದ ಶ್ರೀ ರುದ್ರನಪೇಟೆ

ಜೋ ಅಲ್ಲ ಅಲ್ಲಾರೆ ಕಂದಮ್ಮ
ಸೈ ಶಾಭಾಸೆ ಕಂದಮ್ಮ ॥ ಅನುಪಲ್ಲ

ಹಾಲುಬೆಣ್ಣೆ ಕೆನೆಮೊಸರು ಮತ್ತಿಟ್ಟೆ ಕಂದಮ್ಮ
ನಾ ಮತ್ತಿಟ್ಟೆ ಕಂದಮ್ಮ
ಏನನಿಟ್ಟರು ಮಲಗ ಕಂದನಿನ್ನೇನ ಮಾಡಲಮ್ಮಯ್ಯ
ನಾ ಹ್ಯಾಗೆ ತಾಳಲಮ್ಮಯ್ಯ। ಜೋ ಅಲ್ಲ ಅಲ್ಲಾರೆ ೧

ಅಂದುಗೆ ಅರಳೆಲೆ ಮಾಗಾಯಿ
ತೋಳ ಭಾಪುರೆ ಕಂದಮ್ಮ
ಏನನಿಟ್ಟರು ಒಲ್ಲದ
ಕಂದಿನ್ನೇನ ಮಾಡಲಮ್ಮಯ್ಯ ೨

ಚಿಣ್ಣಿಕೋಲು ಚೆಂಡು ಬುಗುರಿ ನಾ
ಕೊಂಡುಕೊಡುವೆ ಕಂದಮ್ಮ
ನಾ ಏನ ಕೊಟ್ಟರು ಆಡದ
ಕಂದಿನ್ನೇನ ಮಾಡಲಮ್ಮಯ್ಯ ೩

ಅಂಗಳದೊಳಗೊಬ್ಬ ಜೋಗಿ ಬಂದು
ನಿಂತಾನೆ ಕಂದಮ್ಮ
ಅವ ನಿಂತಾನೆ ಕಂದಮ್ಮ
ಅತ್ತರೆ ನಿನ್ನ ಅತ್ತತ್ತಲೆಳೆದೊಯಿದನಲ್ಲಮ್ಮ ೪

ದೇಶದೊಳಧಿಕವಾದ ರಾಮದುರ್ಗ ಕಂದಮ್ಮ
ಈಶಬೆಟ್ಟದನಂಜೇಶನ ಪಾದವ ನೆನೆಯೆ ಕಂದಮ್ಮ ೫

## ೭೮. ಚಂದಮಾಮ

ಮುಂದುಮುಂದಕೆ ಮುಕ್ತನಾದುದೊಂದು ಚಂದಮಾಮ
ಅಂಧಕನಯನವ ತೆರೆದು ನೋಡುವದೊಂದು ಚಂದಮಾಮ ॥ ಪಲ್ಲ

ಐದುಬಣ್ಣದ ಪಕ್ಷಿ ಮೆದ್ದೊಳವುದೊಂದು ಚಂದಮಾಮ
ನೈದಿಲು ಕುಮುದವು ನೆರವಾದುದೊಂದು ಚಂದಮಾಮ
ಹೊಯ್ದರೆ ಚಿಗಿತಿತು ಹೊಸತಾದುದೊಂದು ಚಂದಮಾಮ
ಐದಲೆ ನೂರೊಂದುತಲೆಯಾದುದೊಂದು ಚಂದಮಾಮ ೧

ಆರುಕಮಲಗಳು ಆಡಿಯಾದುದೊಂದು ಚಂದಮಾಮ
ಆರೂಢಧ್ವನಿಯು ಸಮಾನವಾದುದೊಂದು ಚಂದಮಾಮ
ಆರಮೀರಿ ಮೂರರೊಳು ನಿಂದುದೊಂದು ಚಂದಮಾಮ
ಆರೂಢನೈವತೊಂದಾದುದೊಂದು ಚಂದಮಾಮ ೨

ಹಾರು ಹಂಸನ ಹತ್ತಗರುವದೊಂದು ಚಂದಮಾಮ
ಮೂರು ಬಾಗಿಲ ಮುಚ್ಚಿ ಮೂಕನಾದುದೊಂದು ಚಂದಮಾಮ
ಮೀರಿ ಗೀರ್ವಾಣಪ್ರಿಯ ಲಿಂಗವಾದುದೊಂದು ಚಂದಮಾಮ ೩

## ೭೯. ತಾಳಲಾರೆನು ನಾನು ಚಂದಮಾಮ

ಚೇಳು ಕಚ್ಚಿತಮ್ಮ ತಾಳಲಾರನು ನಾನು ಚಂದಮಾಮ
ಹೇಳಲಿಕಳವಲ್ಲ ಭಾಳಲೋಚನ ಬಲ್ಲ ॥ ಪಲ್ಲ

ಕತ್ತಲೆ ಮನೆಯೊಳು ಎತ್ತಲಿಂದಲಿ ಬಂತು ಚಂದಮಾಮ
ಮುತ್ತಿನಂಥ ಕೊಂಡಿ ಒತ್ತಿತು ಉರಿ ಭಾಳ ಚಂದಮಾಮ ೧

ಪ್ರಾಯದ ಬಾಲೆ ಮಕ್ಕಳು ಮನೆತುಂಬ ಚಂದಮಾಮ
ದಿಕ್ಕಾಪಾಲ ಮಾಡಿ ಒಕ್ಕಲಗೆಡಿಸಿತ್ತು ಚಂದಮಾಮ ೨

ಹೆಚ್ಚಿನ ಒಗತನ ಮೆಚ್ಚಿ ಮೋಹಿಸುತಾಗ ಚಂದಮಾಮ
ಕಚ್ಚಿತ್ತೆ ಬೆರಳನು ಹುಚ್ಚುಗೊಂಡೆನು ತಾಯಿ ಚಂದಮಾಮ ೩

ಆರುಮಣೆಯ ಚೇಳು ಊರಿತು ಕೊಂಡಿಯ ಚಂದಮಾಮ
ಭೋರುಗುವತದ ಮಾರಿ ಮಾರಣದ ಕಿಚ್ಚು ಚಂದಮಾಮ ೪

ಮುಚ್ಚಲಾಕ್ಷಣ ಬೆದರಿಯೆ ಬೆವತ ನಾನು ಚಂದಮಾಮ
ಹುಟ್ಟು ಹೊಂದಳಿದನೆ ಬಟ್ಟಬಯಲು ಕೂಡಿ ಚಂದಮಾಮ ೫

ಅಂಜಿ ಮೈ ನಡುಗಿ ನಂಜುಂಡಿತ್ತೆ ದೇಹವು ಚಂದಮಾಮ
ಸಂಜೆಗತ್ತಲೆಯೊಳು ಪಂಜಿನಂಥ ಉರಿ ಕಾಣೆ ಚಂದಮಾಮ ೬

ಗಣಿತಗಳಿಲ್ಲದೆ ಕುಣಿಸಾಡುತಲದೆ ಚಂದಮಾಮ
ಝಣಝುಣರೆಂಬುತ ರಣಮಯ ತೋರಿತು ಚಂದಮಾಮ ೭

ಚಂದವುಳ್ಳ ಚೇಳು ತಾ ಅಂದದಿ ಕಚ್ಚಲು ಚಂದಮಾಮ
ಮುಂದುವರಿಯದಾದ ಮಹವನೊಳಕೊಂಡು ಚಂದಮಾಮ ೮

ಕೊರಳು ಕಟ್ಟಿ ನೀ ಒಳಗಿರುವ ಚೇಳಲ್ಲದ ಚಂದಮಾಮ
ಶಿರದೊಳುಂಟದೆ ತರಿಯದ ಕೆಂಡವು ಚಂದಮಾಮ ೯

ಏನ ಹೇಳಲಿ ಮುನ್ನ ಬೇನ ಬಿಡಿಸಿದರ್ಗೆ ಚಂದಮಾಮ
ತನುವನು ಮಾರುವೆ ತನಗೆ ಹರಕೆಗಟ್ಟಿ ಚಂದಮಾಮ ೧೦

ಬಿಡುವೆನು ವೇದವ ನಡವೆನು ನೇಮದಿ ಚಂದಮಾಮ
ಹಿಡಿವೆನು ಮನವ್ರತ ಮೃಡನಿತ್ಯಾನಂದಗೆ ಚಂದಮಾಮ ೧೧

## ೮೦. ಅಲ್ಲಮಪ್ರಭು ಸಂಗೀತ

*ರಾಗ: ಸೌರಾಷ್ಟ್ರ*

ಅಲ್ಲಮಪ್ರಭುಲಿಂಗನನುಪಮದಿಂದಿಪ್ಪದೈ ದುರಿತಯ
ಬಲ್ಲಷ್ಟು ಪೇಳುವೆನಧಿಕ ಹರುಷದಿಂದ ಕೇಳಿ ನೀವು ‖ ಪಲ್ಲ

ನಿರಹಂಕಾರ ಸುಜ್ಞಾನದೇವಿಯರಿಗೆ ವರದನಾಗಿ ಚೆಲ್ವ
ಪರಿಪರಿವಿಧದಲಿ ಮೆರೆದು ತೋರಿದ ತಾನು ಬಾಲಲೀಲೆಯ
ಉರುತರ ಯೌವನ ರೂಪ ತಳೆದು ಮಧುಕೇಶನಲ್ಲಿಗೆ ಹೋಗಿ
ಪಿರಿದು ತೋರಿಸಿದ ಸಕಲರಹುದೆನಲು ಮೃದಂಗಲೀಲೆಯ ೧

ಮಾಯಾದೇವಿ ಮಹಿಸೂರಿಂದ ಬಂದಾಲಿಂಗನವ ಮಾಡ (ಘನ)
ಮಾಯೆಗೆ ಸಿಕ್ಕದೆ ಒದಗಿ ತೋರಿದನು ನಿರ್ವಯದ ಲೀಲೆಯನು
ಆಯಾಸದಿಂ ಕಳವಳದಿ ಮಾಯೆಯು ತನ್ನ ಬೆನ್ನ ಬಿಡದೆ ನಿಂದು
ಬಾಯ ಬಿಡುವ ಮಾಯೆ ವಿಮಲ ತೋರಿದ ಪ್ರತ್ಯಕ್ಷಲೀಲೆಯ ೨

ಪಥವಿಡಿದು ಬರುತ ಕಂಡನಲ್ಲಿ ಗೊಲ್ಲಯ್ಯಗಳನು ಸ
ನ್ನುತವಾಗುವಂತ ಕಾಣಿಸಿ ತೋರಿದ ಸಂಭಾಷಣದ ಲೀಲೆಯ

ಅತಿಶಯವಾದನುಮಿಷದೇವರನು ನಿರೀಕ್ಷಿಸುತ್ತೆ ದೇವ
ಕ್ಷಿತಿಯೊಳಗೆ ತೋರಿದ ಇಷ್ಟಲಿಂಗ ಸ್ವೀಕರದ ಲೀಲೆಯ ೩

ಎಸೆವ ಮುಕ್ತಾಯಿ ಮೋಹದಿ ಬಳಲುತಿರೆ ದಯದಿ ತಾನ ಅಂದು
ಕುಶಲಜ್ಞಾನವಿತ್ತು ತೋರಿದ ಶೋಕನಿರಸನದ ಲೀಲೆಯ
ಒಸೆದು ಸೊನ್ನಲಂಘ್ರಿಯರಿಗೆ ವಿತಟಾಕಗಟ್ಟುವಾಗುಡು
ಪಶುಗಳಿಂ ಕೈಕೊಂಡು ಶಿಲೆಯಕುಸುಮ ಪೂಜಾವಿಧದ ಲೀಲೆಯ ೪

ಸಿದ್ಧರಾಮನು ಕೋಪದಿಂದ ನೊಸಲಿನಗ್ನಿಯನು ಬಿಡಲು ಮಹಾ
ಸಿದ್ಧನಾದನು ನಿವೃತ್ತಿಯ ಮಾಡಿ ತೋರ್ಪ ಕಾರುಣ್ಯಲೀಲೆಯ
ಉದ್ಧರಿಸುವೆನೆಂದು ಮರುಳುಶಂಕರನಿದ್ದಡೆಯ ತೋರುವ ನಿಜ
ದದ್ವಯಬೋಧೆಯೆಂಬೊಲಿದು ಕೊಟ್ಟನು ಮೋಕ್ಷವರದ ಲೀಲೆಯ ೫

ವಿನುತ ಪ್ರಮಥ ಬಸವ ಮೊದ ಪ್ರಮಥರಧಿಕಾರವರಿತು ತೋರಿ
ದನು ಇಷ್ಟಲಿಂಗಗತಿಯ ಮಾರ್ಗದ ಸವಿಸ್ತರದ ರತಿಯ
ಘನತರಯೋಗವಿಂತಿದ ನಿಲುಮಾಡೆಂದು ಪೇಳ್ದನವರಿಗೆ ತೋರಿ
ತನುನಯ ಸಾಧಕಾಂಗದ ಗತಿಯುಪದೇಶಕದ ಲೀಲೆಯ ೬

ಅಕಳಂಕಗುರುವನರಸಿ ಕಂಡ ಮಹದೇವಿಯಕ್ಕಗಳಿಗೆ ಬೇಗ
ಸುಖಮುಖದಲಿವ ಕಾಣಿಸುವ ತೆರದ ಅನುಗ್ರಹದ ಲೀಲೆಯ
ನಿಖಿಳವಿದ್ಯಗಳ ಸಾಧಿಸಿ ಸಿದ್ಧನಾದನೆಂದಿರುತಲಿಪ್ಪ ಗೋರ
ಕ್ಷಕನ ಹಮ್ಮನು ಕೆಡಿಸುವ ಪರೀಕ್ಷೆಪಾಲನದ ಲೀಲೆಯ ೭

ತವೆ ಮುದವೆತ್ತು ಸಾಧಿಸಿ ಋಷಿಗಳಾಶ್ರಮವನು ಪೊಕ್ಕು ಕೇಳಿ
ದವರವರನುವೆಂತೆಂತುಸುರಿದ ಬೋಧಾಮೃತದ ಲೀಲೆಯ
ಭವವ ಕೆಡಿಪರಿಲ್ಲಿ ಕನಲಿದೆಯೆಂಬಂತೆ ಬಂದ ವಾದ
ಗವಿರಳ ಮುಕ್ತಿಯನಿತ್ತೆಯೋಯುದಾಹರಣದ ಲೀಲೆಯ ೮

ಅಪರಿಮಿತ ದೇವಾಲಯ ತೀರ್ಥ ಕ್ಷೇತ್ರಾದಿಗಳ ತನ್ನ
ವಿಪುಳಪಾದದ ಸೋಂಕಿನಿಂದುದ್ಧರಿಸಿದ ವಿಹಾರಲೀಲೆಯ
ಜಪಿಪಂಗತಿ ಸಿದ್ಧಿಯುಳ್ಳ ಸವಾಲಕ್ಷಪರ್ವತದಲ್ಲಿ ನೋಳ್ಪ
ರುಪಮೆಗೆ ನಿಲುಕದ ಸುಖದೊಳಿಪ್ಪ ಸಮಾಧಿಲೀಲೆಯ ೯

ಮಿಗೆ ತನ್ನ ದರುಶನಕೆ ಅಪೇಕ್ಷಿಪರೆಂಬನುವ ತಿಳಿದು ಮನ
ಸೊಗಯಿಪ ಬಸವಾದಿಗಣ ತೋರಿದ ವಿಕಟಾಂಗ ಲೀಲೆಯ
ಜಗದೊಳಚ್ಚರಿಯಾದ ಕಲ್ಯಾಣಪುರಿಗೆ ಪ್ರವೇಶವಾಗುತ್ತ ನೆರೆ
ದಗಣಿತ ಜನರ ನಗುತಲಿಹ ಮಹಿಗಳೋತ್ಸಾಹ ಲೀಲೆಯ ೧೦

---

* ಒಂದು ಪಂಕ್ತಿ ಲುಪ್ತ

ಒಡನೆ ಬಂದರಮನೆಯೊಳು ಪೊಕ್ಕು ನಾಲ್ದೆಸೆಗಳ ನೋಡುತ
ಕಡುಮುದದಿಂದವಲೇರಿದ ಶೂನ್ಯಪಿತಮೂರ್ತನದ ಲೀಲೆಯ
ತಡೆಯೆಡೆಯೊಳು ಬಸವ ಹಸಿದೊ ನಾವೆಂದು ಪೇಳಲು ಅತಿ
ಸಡಗರ ವಿಂಗಡಣೆಸಿ ತೋರಿದ ಭೋಜನದ ಲೀಲೆಯ ೧೧

ಅಮಮ ಜಂಗಮಕೆಲ್ಲ ತೃಪ್ತಿಯಾದುದನು ಬಿಜ್ಜಳನು ಕೇಳಿ ನಕ್ಕು
ಕ್ರಮದಪ್ಪಿ ನುಡಿಯಲಂತವರ್ಗೆ ತೋರಿದಗುರ್ವಾತ್ಮಕದ ಲೀಲೆಯ
ವಿಮಲಚರಿತವಾದ ಬಸವಾದಿ ಭಕ್ತಸಾಧಕವ ಬೋಧಿಸಿ ಆಗ
ತಮತಮಗರಿದು ನುತಿಸಿ ಕಾಣಿಸಿದ ಮನೋಲಯದ ಲೀಲೆಯ ೧೨

ಬಹು ಕಾಲಜ್ಞಾನವಿಂತೆಂದು ಪೇಳಿದು ಲೋಕಪರಿಯಲೆಂದು ಸರ್ಬ
ರಿಹ ಕಾಲದಲ್ಲಿ ತಿಳಿದು ಕಾಲಜ್ಞಾನನಿರುಪಮ ಲೀಲೆಯ
ಅಹುದಹುದಿಂತಲ್ಲವಿನ್ನ ತೋರುವನನಂತ ಲೀಲೆಯ ವರ
ಮಹಿಸೂರೊಳೆಸೆದು ತೋರುವ ಪ್ರಭು ಗಂಗೇಶಲಿಂಗಲೀಲೆಯ ೧೩

## ೮೧. ಉದಯರಾಗ

ಮಂಗಳಾತ್ಮಕನೆ ಮಾಯಾಂಗನೆಯ ಗೆಲಿದವನೆ
ಹಿಂಗದೆಯೆ ನೆನವವರ ಜಡವನೀಡಾಡುವನೆ
ಜಂಗುಳಿಯದ್ವೈವಂಗಳೊಡೆಯ ಕೊಟ್ಟೂರಬಸವಲಿಂಗನೊಲಿದುಪ್ಪವಡಿಸಾ ॥ ಪಲ್ಲ

ರವಿಕಿರಣ ಪಸರಿಸಿತು ಕುಮುದಗಳು ಅರಳಿದವು
ಅವರವರ ಭಾಷೆಯಲಿ ಪಕ್ಷಿಗಳುಲಿಯುತಿಹವೆ
ಶಿವ ನಿಮ್ಮ ಭಜಿಸಲ್ಕೆ ಮುಕುಂದ ಬಂದಹನೆ ಅವಧಾನಿ ಸ್ವಾಮಿ ಪರಾಕು (?)
ಯುವತಿಯರು ಉಮೆ ಗಂಗೆ ವೀಭೂತಿಯಗ್ಘಣೆಯ
ಹವಣಿಸಿಯೆ ತಂದಿಹರ ನಿಮ್ಮ ಮುಖಮಜ್ಜನಕೆ
ಭವರೋಗ ವೈದ್ಯನೇ ಶಿವಪೂಜೆ ಮಾಡೇಳು ಶಿವಗಣಂಗಳು ಬಂದಹರೆ ೧

(ಮಂಗ)ಳೆಯು ಮಂಗಳಾರತಿವಿಡಿದು ನಿಂದಿಹಳು
ಶೃಂಗರಿ(ಸಿ) ಚಂಡೆ ಮದ್ದಳೆ ಘಂಟೆ ಭೃಂಗೀಶ
ಸಿಂಗಿನಾದಶಿವ ಉಭಯನಾಗಿಸುತಲ್ಲಹರೆ ತುಂಬುರರು ಪಾಡುತಿಹರೆ
ಕುಂಬಾರಗುಂಡಯ್ಯ ಕೆಂಭಾವಿ ಭೋಗಣ್ಣ
ಅಂಬಿಗರಚೌಡಯ್ಯ ಅಲ್ಲಮನು ಅಜಗಣ್ಣ
ನಂಬ್ಯಣ್ಣ ಚೇರಮನು ಸಿಂಧುಬಲ್ಲಾಳ ಬಂದ ಶಂಭುವೊಲಿದುಪ್ಪವಡಿಸಾ ೨

ಕಕ್ಕಯ್ಯ ಚಿಕ್ಕಯ್ಯ ಕಲಕೇತ ಬ್ರಹ್ಮಯ್ಯ
ಮುಕ್ಕಣ್ಣ ನಿಮ್ಮನೊಲಿಸಿದ ತೆಲುಗ ಜೊಮ್ಮಯ್ಯ
ಒಕ್ಕರಳು ನಿಮಗೆಂದು ಶ್ವೇತನೊಯ್ಯಲುದ್ಭಟನು ಇಕ್ಕದ ಮಾರ ಬಂದ
ಹಿಕ್ಕೆಯೊಳು ನಿಮ್ಮ ನೆನೆವಂತ ಗೊಲ್ಲಾಳ ಚೋಳ
ಢಕ್ಕೆಯಾಮಾರಯ್ಯ ಮಡಿವಾಳಮಾಚಯ್ಯ
ಒಕ್ಕಲಿಗಮುದ್ದಯ್ಯ ವೀರಭದ್ರನು ಬಂದ ಅಕ್ಕರೊಲಿದುಪ್ಪವಡಿಸಾ ೩

ಬಾಹೂರಬ್ರಹ್ಮಯ್ಯ ನುಲಿಯಚಂದಯ್ಯಗಳು
ಹಾವಿನಾಹಾಳ ಕಲ್ಲಯ್ಯ ಕನ್ನಪ್ಪಗಳು
ಜಾವಕೆ ತರುವ ಕನ್ನದ ಬ್ರಹ್ಮಯ್ಯ ಡೋಹರದ ಕಕ್ಕಯ್ಯ ಬಂದ
ಆವಾಗ ತಮ್ಮ ನೆನೆವನಂತಲ್ಲ ಸೋಮಯ್ಯ
ಸೇವಕನು ಹೊಡೆಹುಲ್ಲ ಬಂಕಯ್ಯ ಶಿಬಿರಾಯ
ರಾಹುಗಳ ಕಯ್ಯ ಕೊಟ್ಟಣವ ಕುಟ್ಟಿಸಿದ ಮಹದೇವನೊಲಿದುಪ್ಪವಡಿಸಾ ೪

ಹಂಡದಾ ಮಾರಯ್ಯ ಕೈಕೂಲಿ ಚಾಮಯ್ಯ
ಕೊಂಡ(ಗುಳಿಯಾ ಕೇಶಿ)ರಾಜ ಸೇದಿಯರಾಜ
ಮಂಡಿಗೆಯ ಮಾದಿರಾಜನು ಬಿಬ್ಬಿಬಾಚಯ್ಯ ಇಂಡಿಯ ಶಾಂತ ಬಂದ
ಪಂಡಿತಾರಾಧ್ಯರು ಬಸವೇಶ್ವರನು ಚನ್ನ
ಮಂಡೆಯೊಳು ದೀಪ ಮುಟ್ಟಿಸಿದ ಕಲಿಗಣನಾಥ
ಕೊಂಡಾಡು ಮಲುಹಣನು ಮೋಳಿಗಯ್ಯನು ಬಂದಖಂಡನೊಲಿದುಪ್ಪವಡಿಸಾ ೫

ಮೇದಾರ ಕೇತಯ್ಯ ಮೆರೆಮಿಂಡ ದೇವಯ್ಯ
ಹಾದರದ ಬ್ರಹ್ಮಯ್ಯ ಅಗ್ಘಣಿಯ ಹೊನ್ನಯ್ಯ
ಮೇದಾರ ಚನ್ನಯ್ಯ ಮೈದುನಾ ರಾಮಯ್ಯ ನಿಮ್ಮ ಪಾದದರುಶನಕ್ಕೆ
ಬಂದಾರೆ..... ದಾರಿಯೊಳು ·ಮೆರೆವ ವೀರಸಂಗಯ್ಯಗಳುವಿ
ನೋದಿಗಳು ಕಾಶದ ಬ್ರಹ್ಮಯ್ಯತಂದೆಗಳು ಅ
ನಾದಿ ಗುರುಬಸವ ನಿಮ್ಮಯ ಪೂಜೆಗೈತಂದರನಾದಿವೊಲಿದುಪ್ಪವಡಿಸಾ ೬

ಹಳ್ಳಯ್ಯ ಮಧುವಯ್ಯ ಹಡಪದಪ್ಪಣ್ಣಗಳು
ಒಳ್ಳಿದರು ಸುಂಕದ ಬಂಕಣ್ಣ ಮೊರಟದ ಬಂ
ಕಯ್ಯ ಬಳ್ಳಯ್ಯಆದಯ್ಯಗಳು ನಿಮ್ಮ ಪಾದದರುಶನಕೆ ಬಂದಾರೆ
ಎಳ್ಳಷ್ಟು ಎರವಿಲ್ಲ ಏಲೇಶಕೇತಯ್ಯ
ಬಾಲಸುಜ್ಞಾನಿ ನೀಲಮ್ಮ ನಂಬವ್ವೆಯರು
ಚಲ್ಲಿಗಂಗಳ ಚೆಲ್ವ ಚಂದ್ರುಣಿಯು ಚೆಂಗಳೆಯರೆಲ್ಲರೊಲಿದುಪ್ಪವಡಿಸಾ ೭

ಕನ್ನೆಕೋಳೂರು ಕೊಡಗೂಸು ಹೇರೂರು
ಹೆಣ್ಣು ಅಮ್ಮವ್ವೆ ರೆಮ್ಮವ್ವೆ ರೇಕವ್ವೆಗಳ
ಭಿನ್ನವಿಲ್ಲದೆ ಚೋಳಿ ಮುಕ್ತಾಯಿಗಳು ಮುನ್ನ ಬಂದಿಹರೆ ಸೋಮೇಶಸಂ
ಪನ್ನೆ ಪಿಟ್ಟವ್ವೆ ಬೊಮ್ಮಲೆಯು ನಾಗಲದೇವಿ
ನಿನ್ನಟ್ಟುಅಡದಿಹ ಮಳೆಯರಾಜ ಸಹವಾಗಿ
ಉನ್ನತದ ಗಾಣದಾ ಕನ್ನಪ್ಪ ಉಂಬದಿಹರೆ ಸಂಪನ್ನನೊಲಿದುಪ್ಪವಡಿಸಾ ೮

ಇಷ್ಟಾರ್ಥಗಳನೀವ ವಸ್ತುನೀವಹುದೆಂದು
ಕಟ್ಟಿಸಿದ ಉಪಮಗುಟ್ಟದ ಹೇಳಿ ಹರಹರಂ
ದಷ್ಟದಿಕ್ಕಿಲಿ ಮುಕ್ತಾಯಿಗಳು ಬಂದಿಹರ ಕೊಟ್ಟೂರ ಬಸವಲಿಂಗ
ಬಿಟ್ಟು ಹೋಹದು ದುರಿತಕಾಂಡಮಂತ್ರದಿ ನಿಮ್ಮ
ಚಿಟ್ಟಿಗನು ಹಾಡುವನು ಪರಶಿವನು ಸಲಹುವನು
ಶ್ರೀ ಗಿರಿಯ ಕೈಲಾಸದಿಂದಿಳಿದೆ ದೃಷ್ಟಮೂರುತಿ ನಲಿದು ಉಪ್ಪವಡಿಸಾ ೯

## ೮೨. ಉಪ್ಪವಡಿಸಾ

ಹರನೆ ಶಂಕರನೆ ತ್ರ್ಯಜಗವ ಪೊರೆವ ದೇವರದೇವ ನಿನ್ನ ಇಕ್ಕೆಲದಿ
ಸುರದುಂದುಭಿ ಶಂಕುವಾದ್ಯಗಳು ಮೊಳಗಿದವು ಸನ್ನವರಿದುಪ್ಪವಡಿಸಾ ॥ ಪಲ್ಲ

ಮೂಡಲು ಕೆಂಪಡರಿ ಕತ್ತಲೆ ಹರಿಯಿತು ಕುಕ್ಕುಟನು
ಕೂಡಿ ಧ್ವನಿಮಾಡಿ ನೈದಿಲು ಬಳಲಿ ತಾವರೆಯು
ಮೂಡಿ ವಿಕಸಿತವಾಗಿ ತುಂಬಿಗಳು ಮೊದಲಾದವಾನಂದದಿಂದ
ಪಾಡಲೈದಿದ್ದ ಶಿವಭಕ್ತರೆಲ್ಲರು
ಮಾಡಿತಂದರು ಪುಷ್ಪರಾಗಗಳ ತಮತಮಗೆ
ರೂಢಿಗೀಶ್ವರ ನಿಮ್ಮ ಶ್ರೀಚರಣವ ನೆನೆಯಲನುವಾದರುಪ್ಪವಡಿಸಾ ೧

ಮೊಲ್ಲೆ ಮಲ್ಲಿಗೆ ಜಾಜಿ ಸುರಭಿ ಶಾವಂತಿಗೆಯು
ಪಲ್ಲವಿಸಿವೆಳೆದ ಪಚ್ಚೆ ಮರುಗ ಮುಡಿವಾಳ
ಅಲ್ಲಿ ಮೃದುವಾದ ಕರಿಯ ದವನ ಮೊದಲಾದವನೆಲ್ಲ ತಂದಿದೆ
ಖುಲ್ಲತನದಲಿ ಯಾರು ದರುಶನವು ತಮತಮಗೆ ಮ....
.....ಬಾಲಕ್ಕೆ ಸಿಕ್ಕಿ ಕಾಣಲರಿಯದ ಶಿವ
ಎಲ್ಲ ದೇವರಿಗೆ ವಲ್ಲಭನೆಂದು ಪೊಗಳೆ ನಲಿನಲಿದು ಉಪ್ಪವಡಿಸಾ ೨

ಗಂಗೆ ಗೋದಾವರಿಯ ಅಗ್ಘಣಿಯನೇ ತಂದು
ತುಂಗಭದ್ರೆಯ ನದಿಯ ಮೊಗೆದು ಕೈಗಡಿಗೆಯಲಿ

ಹೆಂಗಳಂಗಳ ಮಧ್ಯದಲಿ ಬಂದು ಸೇರಿದರು ರಂಗವಾಲಿಯ ತುಂಬಲು
ಲಿಂಗೈಕ್ಯವುಳ್ಳ ಶಿವಭಕ್ತರೆಲ್ಲರು ಬಂದು
ಮಂಗಳನೊಲಿದು ಪಾಡಿದರು ಮುನ್ನ ರಾಗದಲಿ
ಶೃಂಗಾರವುಳ್ಳ ಹೇಮಾವತಿಯ ವಿರೂಪಾಕ್ಷ ಲಿಂಗನೊಲಿದುಪ್ಪವಡಿಸಾ ೩

## ೮೩. ಏಳಯ್ಯ

ಏಳಯ್ಯ ಪಾರ್ವತೀರಮಣ ಪಾವನ ಚರಣ
ಏಳಯ್ಯ ಫಣಿಕುಲಾಭರಣ ಸೇವಕ ನಯನ
ಏಳಯ್ಯ ಶರಣುಜನಸಂಗ ಸದಯಾಪಾಂಗ
ಏಳು ನಂಜುಂಡಲಿಂಗ ॥ ಪಲ್ಲ

ಕಮಲಸಂಭವ ಮುಖ್ಯ ವಿಮಲ ವಿಶ್ವಾಮಿತ್ರ
ಜಮದಗ್ನಿ ವಾಮದೇವಾತ್ರಿ ಕಣ್ವಾಂಗಿರಸ
ಕ್ರಮದಿ ಕಶ್ಯಪ ವಶಿಷ್ಟ ಶಿಷ್ಯಾದಿಗಳು ನಿಂದಿಹರೆ
ಉಮೆಯರಸನುಪ್ಪವಡಿಸಾ ೧

ವೃಂದಾದಿ ಅಮರದಿಕ್ಪಾಲಕರು ಒಂದೆಸೆಯೊಳಗೆ
ವಂದಿಸುತ ನಾರದರು ಒಲಿದು ಗಾನವ ಪಾಡೆ
ನಂದೀಶ ಭೃಂಗಿ ನಾಟ್ಯವನಾಡುತಾರೆ ಆ
ನಂದದೊಳುಪ್ಪವಡಿಸಾ ೨

ಗರುಡ ಗಂಧರ್ವ ಕಿನ್ನರ ಯಕ್ಷ ಕಿಂಪುರುಷ
ಪರಮ ಪುರುಷನ ನಿಮ್ಮ ಪಾದವೇ ಗತಿಯೆಂದು
ನೆರೆದು ನಿಂದಿರುತ ಓಲೈಸುತ ನಿಂದಿಹರೆ
ಗರಳಪುರಿ ನಂಜುಂಡೇಶ ದೇವ ೩

## ೮೪. ಹರನೆ ಏಳಯ್ಯ ಬೆಳಗಾಯಿತು

ಎಲ್ಲ ದೇವರ ದೇವ ವಲ್ಲಭ ಸದಾಶಿವನ
ಕಲ್ಲಿಲಿಟ್ಟವಗೊಲಿದೆ ಕಾರುಣ್ಯಸಿಂಧುವ
ಬಲ್ಲಾಳಗೊಲಿದು ಭಕ್ತಿಗೆ ಮೆಚ್ಚಿಸಿ ತಪ್ಪದೆ ಬಿಲ್ಲೇಶನುಪ್ಪವಡಿಸ ॥ ಪಲ್ಲ

ಮುಂಗೋಳಿ ಕೂಗುತಿದೆ ಮುಂಬರಿವುತಿದೆ ಮೂಡ
ತೆಂಕ ಪಡವಲು ಬಡಗ ತಿಮಿರ ತೆಗೆದೋಡುತಿದೆ

ಪಂಕಜವು ನಲಿವುತಿದೆ ಪರಮೆಗಳು ಪಾಡುತಿವೆ ಓಂಕಾರದಿಂದ ನಲಿಯೆ
ಕೊಂಕುತಿವೆ ಕುಮುದಗಳು ಕೊಳರ್ವಕ್ಕಿ ಪಾಡುತಿವೆ
ಶಂಕಿಸದೆ ಚಂದ್ರಮನು ಶೈತ್ಯಕರಗಳ ಮುಗಿದ
ಲಂಕರಿಸಿ ಭಾಸ್ಕರನು ಉದಯಾದ್ರಿಗೈತಂದ ಶಂಕರನೆ ನೀನುಪ್ಪವಡಿಸಾ ೧

ಕಂಬಲಾಶ್ವತರ ಗೀತವ ಲಾಲಿಸುವರೇಳು
ತುಂಬುರ ನಾರದಾದಿಗಳು ಬಾರಿಸುವ ವೀಣೆಗಳ ಕೇಳು
ರಂಭೆಯೂರ್ವಶಿ ಮೇನಕೆ ತಿಲೋತ್ತಮಯೆಂಬ ದೇವಾಂಗನೆಯರ
ಇಂಬಾದ ನೃತ್ಯವನು ನೋಡೇಳು ಬಾಗಿಲೊಳು
ಸಂಭ್ರಮಿಪ ನಂದಿ ಭೃಂಗೀಶ್ವರಿಯು ಮಹಕಾಳಿ
ಯೆಂಬ ಗಣನಿಕರ ಜಯಜಯವೆಂದು ಪೊಗಳುತಿದೆ ಶಂಭು ನೀನುಪ್ಪವಡಿಸಾ ೨

ಧರೆಯೊಳತ್ಯಧಿಕವೆಂದೆನಿಸಿ ರಾಜಿಸುತಿಹ
ಪರಶುರಾಮಕ್ಷೇತ್ರದಲಿ ಕೌಂಡಿನೀ ಕಪಿನಿ
ವರ ನದಿಯ ಮಧ್ಯದೋಳಿಪ್ಪ ನಂಜನಗೂಡ ಪುರದಲ್ಲಿ ನೆಲಸಿ ಜಗವ
ಹೊರವ ಹರಿಗೆಣೆಯ ನೀ ಹೊತ್ತು ಸುರರಿಗೆ ಕಾಯ್ದು
ನಿಟಲ ನಯನನೆ ದೇವ ಸರಸವೀಭೂತೇಶ
ಸ್ವಾಮಿ ನಂಜುಂಡೇಶ ಕರುಣದಲಿ ಒಲಿದು ನೀನುಪ್ಪನವಡಿಸಾ ೩

## ೭೫. ನಂಜುಂಡ ದೇಶಾಧಿಪ

ಶಿವನೆ ಏಳಯ್ಯ ಬೆಳಗಾಯಿತು
ಏಳು ಬೆಳಗಾಯಿತನ್ನೊಡಯ ದೇವರ ದೇವ
ಭಾಳಲೋಚನನೆ ಭಾಗೀರತಿಯ ಪ್ರಾಣೇಶ
ನೀಲಕಂಠ ನಿರ್ಮಳ ನಿಮ್ಮ ನಂಬಿದನೀಶ ಪಾಲಿಸೈ ಪರಮೇಶನೆ ॥ ಪಲ್ಲ

ಉರಗಕುಂಡಲಧರಿಸು ಉಮೆಯ ತೊಡೆಯೊಳಗಿರಿಸು
ಶಿರಮಾಲೆಗಳವಡಿಸು ಶಿವಶರಣರನು ತರಿಸು
ಕರಿದೈತ್ಯನುತ್ತರಿಸು ಕಾರುಣ್ಯಮೂರ್ತಿಯೆಂದೆನಿಸು
ಸರಸಸದ್ಗುಣವಿಲಾಸ ಚಂದ್ರಮೌಳೀಶ ೧

ವಿಷವ ಕಂಠಕೆ ನೀಡು ಈರೇಳು ಲೋಕದೊಳಾಡು
ಒಸೆದುಂಬ ಮನೆ ಮಾಡು ಮಲತತ್ರಿಪುರಕೆ ಸೂಡು
ಹಸಿದು ಭಿಕ್ಷವ ಬೇಡು ಸತಿಯ ಜಡೆಯೊಳು ಕೂಡು
ಭಸಿತ ಬಹಳದಿ ಕೂಡು ಭಕ್ತರ್ಗೆ ಅಭಯ ನೀಡು ದೇವ ೨

ಗರಳಪುರಾಧೀಶ ಕಪಿನಿತೀರ ನಿವಾಸ
ಪರಮಮುನಿಗಳ ಪೋಷ ಪಾರ್ವತಿಯ ಪ್ರಾಣೇಶ
ನೆರೆ ನಂಬಿದೆನೊ ಈಶ ಸುರರೊಡೆಯ ಸರ್ವೇಶ
ಸುಮನಸಪ್ರಿಯ ನಂಜುಂಡ ದೇಶಾಧಿಪ ೩

## ೮೬. ಶಿವನೆ ಏಳ್ಳೆ

*ರಾಗ: ಧನ್ಯಾಸಿ*

ಏಳಯ್ಯ ಬೆಳಗಾಯಿತು ಶಿವನೆ
ಏಳಯ್ಯ ಬೆಳಗಾಯಿತು ॥ ಪಲ್ಲ

ಏಳೇಳು ಚಿನ್ಮಯನೆ ಏಳು ಗಂಗಾಧರನೆ
ಏಳು ಗೌರೀಮನೋಹರ ಶಂಕರನೆ
ಏಳು ಗರಳಪುರದೊರೆಯೆ ಶ್ರೀ ಚಂದ್ರಶೇಖರನೆ
ಏಳು ನಿರ್ಗುಣರೂಪನೆ ಶಿವನೆ
ಆಗಮದ ಘೋಮಗಳು ಈ ವೇಳೆ ಆಗುತಿದೆ
ತಾರಕಗಳಡಗಿ ತಂಗಾಳಿ ಬೀಸುತಲಿದೆ
ಅರುಣ ಉದಯದಲೆದ್ದು ಭಕ್ತರು ಬಾಗಿಲಲಿ
ಏಳೆನುತ ಎಬ್ಬಿಸಿದರು ಶಿವನೆ ಏಳ್ಳ ೧

ಮಣಿಕರ್ಣಿಕೆಯು ಗಂಗೆವೆರಸಿ ಪೊಂಗಲಶದಲಿ
ಘನಪಭಕ್ತರು ಶುಭ್ರವಸ್ತ್ರಹರಿವಾಣದಲಿ
ಪರಿಪರಿಯ ಪುಷ್ಪಜಾಜಿಗಳ ಶೋಧಿಸಿ ತಂದು
ದಳಗಳನು ಹಲವು ತುಂಬಿ
ಪರಿಮಳದ ಶ್ರೀಗಂಧವನು ಬಟ್ಟಲೊಳಗಿರಿಸಿ
ಪುಣುಗುಜವ್ವಾದಿ ಕಸ್ತೂರಿ ಕದಂಬವೆರಸಿ

ಗಿರಿಜೆಯರಸನ ಸಮಯ ನೋಡುತಲೆ
ಬಾಗಿಲೊಳು ಏಳೆನುತ ಎಬ್ಬಿಸಿದರು ೨

ಸೋಗೆನವಿಲು ಗಿಳಿ ಹಂಸೆಗಳು ಕುಣಿಯುತಿವೆ
ಪೂಗಳೆಲ್ಲವು ನಿಮ್ಮ ಸಿರಿಮುಡಿಗೆ ಬಹೆವೆಂದನು
ರಾಗದಲಿ ನಗುತಿರ್ದವು
ತ್ಯಾಗ ಪರಿಮಳದ ಸಾರವುಯೆಲ್ಲ
ಪೋಗುತಲಿದೆ ಕಾದ ಪನ್ನೀರು ಹದನಾಗಿ ಬಿಸಿಯಾರುತಿದೆ
ನಾಗಹಾರನೆ ನಗಜೆಯರಸನೆ
ತ್ರಿಜಗಕಾಧಾರವೆನಿಸುವ ದೇವನೆ
ಶಿವನೆ ಏಳಯ್ಯ ಬೆಳಗಾಯಿತು ೩

## ೮೭. ಏಳು ನಂಜುಂಡಲಿಂಗ

ಹರನೆ ಏಳಯ್ಯ ಬೆಳಗಾಯಿತು
ಏಳು ವರ ಧವಳಾಂಗ ಏಳು ದೇವೋತ್ತುಂಗ
ಏಳು ಗಿರಿಜಾಲಿಂಗ ಏಳು ಸನ್ಮುನಿಸಂಗ
ಏಳು ಮನಸಿಜಭಂಗ ಏಳೆನ್ನ ಭವಹಿಂಗ
ಏಳು ನಂಜುಂಡಲಿಂಗ ॥ ಪಲ್ಲ

ಹರಿವುತಿದೆ ತಮ ಕೆಂಪು ಮೆರೆವುತಿದೆ ಮೂಡದೆಸೆ
ಜರಿವುತಿದೆ ಥಾರೆ ಭೋರ್ಗರೆವುತಿದೆ ಶಂಖ
ಬಿರಿವುತಿದೆ ಕಮಲ ಮುಂಬರಿವುತಿದೆ ರವಿಕಿರಣ
ಬೆಳವುತಿದೆ ದಿನಪಗರ್ಘ್ಯವನು ವಿಪ್ರವೃಂದ
ಎಲೆ ದುರಿತಹರನುಪ್ಪವಡಿಸಾ ೧

ವೀರಭದ್ರ ವಿನಾಯಕ ಭೃಂಗಿ ಷಣ್ಮುಖರು
ನಾರದರು ನಂದೀಶ ನಂದಿ ಚಂದ್ರಮ ಚೋಳ
ಸಾರೂಪ್ಯವನು ಪಡೆದು ಶರಣರೆಲ್ಲರು ಬಂದು ಸೇರಿದರು ಧನುಪುರವನು
ದಾರುಕ ರೇಣುಕರು ಸಪ್ತರುಷಿಗಳು ಸಹಿತ
ಭೋರೆಂದು ನಿಗಮದೊಳು ನಿಮ್ಮ ಕೊಂಡಾಡುತಿರೆ
ಪಾರ್ವತೀರಮಣ ಪರಶಿವಮೂರ್ತಿ ಪರಬ್ರಹ್ಮ ಪುರಹರನೆ ಉಪ್ಪವಡಿಸಾ ೨

ಪದ್ಮನಾಭನು ಚತುರ್ಮುಖ ಸುರರು ನವಕೋಟಿ
ಸಿದ್ಧರು ಗರುಡ ಗಂಧರ್ವ ಕಿನ್ನರರೆಲ್ಲ
ಶುದ್ಧ ಧನ್ಯಾಸಿಯನು ಪಾಡಿ ತಂಬುರವಿಡಿದು ಹೋದರು ಹೊರಬಾಗಿಲ
ಎದ್ದು ಓಲಗಕೆ ಧನುಪುರದ ಬಿಲ್ಲೇಶ ಅರ್ಜು
ನಗೆ ಶರವಿತ್ತ ಭವರೋಗ ವೈದ್ಯನ ಅತ್ಯಂತ
ಗಣ್ಯನ ಅಗಣಿತಮಹಿಮನ ರುದ್ರ ನೀನುಪ್ಪವಡಿಸಾ ೩

## ೮೮. ಸೋಬಾನವೆ

ಕನಕಾದ್ರಿ ನೆಲೆವಾಸ ಕರುಣ ಪರಾಕು
ಕರಿಚರ್ಮಾಂಬರಧರನೆ ಪರಾಕು
ಕರದೊಳು ನಯನ ಕಪಾಲಿ ಪರಾಕೆಂದು
ಕರಿಮುಖನಜನಕ ಹಸಗೇಳು ಸೋಬಾನಮೆ ॥ ಪಲ್ಲ

ಕಾಲಮರ್ದನ ಕಾಲಾತೀತ ಪರಾಕು
ಕಾಲವನರಿವ ಕಪಾಲಿ ಪರಾಕು
ಶೈಲಜವೈರಿಯ ಲೋಲ ಪರಾಕೆಂದು
ಬಾಲೆಯರು ಹಸೆಗೆ ಕರೆದರು ಸೋಬಾನಮೆ ೧

ಶೇಷಭೂಷಣ ಸರ್ವೇಶ ಪರಾಕು
ವಾಸವಾರ್ಚಿತ ಧರ್ಮೇಶ ಪರಾಕು
ಮೂಷಕವಾಹನಧರನೆ ಪರಾಕೆಂದು
ಈಶ ಬಾ ಹಸೆಯ ಜಗಲಿಗೆ ಸೋಬಾನಮೆ ೨

ಕಂಗಳು ಮೂರುಳ್ಳ ಶಿವನೆ ಪರಾಕು
ಶೃಂಗಾರ ಸೊಬಗುಳ್ಳ ಸುಗುಣ ಪರಾಕು
ಗಂಗೆಯ ಶಿರದೊಳು ಪೆತ್ತ ದೇವ ಪರಾಕೆಂದು
ಅಂಗನೆಯರು ಹಸೆಗೆ ಕರೆದರು ಸೋಬಾನಮೆ ೩

ಪಂಚಮುಖದ ಪರಶಿವನೆ ಪರಾಕು
ಸಂಚಿತಧರ್ಮ ರಕ್ಷಿತ ಪರಾಕು
ಪಂಚಬಾಣನೊಳು ರಂಜಿಪ ಶಿವನೆ ಪರಾಕೆಂದು
ಪಂಚಲಿಂಗಾಂಗಿ ಹಸೆಗೇಳು ಸೋಬಾಸಮ ೪

## ೮೯. ಸುಗುಣನಾಡಿದನುಯ್ಯಾಲೆಯ

ನಗುತ ನಗಜಾತೆ ಸಹಿತ ಮಹಾದೇವ
ಸುಗುಣನಾಡಿದನುಯ್ಯಾಲೆಯ ॥ ಪಲ್ಲ

ರತ್ನಮಯ ಪೀಠದಲಿ ಸ್ವಾಮಿಯನು
ಅತ್ಯಧಿಕದಿಂದೋಲೈಸುತ
ಇತ್ತೆರದಿ ನಿಂದು ಜನರು ವಂದಿಸುತ
ಅತ್ಯಧಿಕ ಮಹದೇವನ ೧

ಆಕಾಶ ಕಂಬ ಮಾಡಿ ಅದರಲೀಜ
ಬೇಕೆನಲು ಸರಪಣಿಯ ಹೂಡಿ
ಲೋಕಸಾಕ್ಷಿಯ ಪೀಠದಿ ಪರಬ್ರಹ್ಮ
ನೂಕಿ ಆಡಿದನುಯ್ಯಾಲೆಯ ೨

ಹೊನ್ನಮಂಟಪದ ನಡುವೆ ಹೊಳೆಯುತಿಹ
ರನ್ನ ಪವಳದ ಕಂಬದಿ
ಉನ್ನತದಿ ಸರಪಣಿಗಳನು ಕೀಲಿಸುತ
ಚೆನ್ನಾಗಿ ರಚನೆಗೈದು ೩

ಮೂರು ಬೀದಿಯ ಮಧ್ಯದಿ
ಮೂರುದೆಸೆಗಿಟ್ಟ ತೇಜ
ಸಾರಿ ವಿರೂಪಾಕ್ಷಗಲ್ಲದೆ ಶಿವ ಮಹಾ
ದೇವನಾಡಿದನುಯ್ಯಾಲೆಯ ೪

ಸಾಲುದೀವಟಿಗೆಗಳು ನಡೆಮುಡಿಯು
ಮೇಲು ಚಾಮರ ಕೊಡೆಗಳು
ಓಲಗದ ಜನರೆಸೆಯಲು ಮಹದೇವ
ಲೋಲನಾಡಿದನುಯ್ಯಾಲೆಯ ೫

ಹತ್ತು ಆಯುಧಗಳನು ಹದವರಿತು
ನೆತ್ತಿಗೇರಿಸಲು ಬಲ್ಲ
ಪೃಥ್ವಿಗಾತ್ಮಕನೆ ಬಲ್ಲ ಪರಂಜ್ಯೋತಿ
ಒತ್ತಿಯಾಡಿದನುಯ್ಯಾಲೆಯ ೬

ಕಾರುಣ್ಯನದಿಯ ತೂಗಿ ಕತ್ತಲೆಯ
ಬೇರನೊಣಗಿಸುವ ಯೋಗಿ

ತಾರಕನ ನೆಲೆಯ ಯೋಗಿ ಶಿವ ಮಹಾ
ದೇವನಾಡಿದನುಯ್ಯಾಲೆಯ ೭

ಮೆರವ ಗಂಗೆಯ ಸ್ಥಿರದ ಕೈಲಾಸದ
ದೊರೆಯು ಮಂಗಳಮೂರುತಿಯು
ತರುಣಿಯರು ತೂಗಿ ಪಾಡೆ ಕರುಣಾ
ಶರಧಿಯಾಡಿ (ದ)ನುಯ್ಯಾಲೆಯ ೮

ಭೇರಿಯನು ಧ್ವನಿಗೈಯುತ ವಾದ್ಯಗಳು
ಭೋರೆಂದು ರಭಸದೊಳಗೆ
ವಾರನಾರಿಯರು ಪಾತ್ರವಾಡೆ ಮ
ಹಾದೇವ ನಲಿದು ಆಡಿದನುಯ್ಯಾಲೆಯ ೯

ವರ ಕಿರೀಟಕುಂಡಲ ಪಾದಸರ
ಕರಚರಣಗಳನು ಸರವನು
ನೆರೆ ಕನಕಭೂಷಣಗಳನು ತಂ
ದಿರಿಸಿದರು ಒಡೆಯ ಮಹದೇವನಿಗೆ ೧೦

ಪರಿಮಳದ ಗಂಧಾಕ್ಷತೆ ಕಸ್ತೂರಿ
ಕರವೀರ ಮಲ್ಲಿಗೆಗಳನು
ಬಿರಿಮುಗುಳು ಪುಷ್ಪಗಳನು ತಂ
ದಿರಿಸಿದರು ಒಡೆಯ ಮಹದೇವನಿಗೆ ೧೧

ಷಡುರಸದ ನೈವೇದ್ಯವ ವಿರಚಿಸುತ
ಮೃಡನಿಗತಿಭಕ್ತಿಯಿಂದ
ಬಿಡದೆ ನಾನಾ ಸೇವೆಯನು ಮಾಡಿದರು
ಒಡೆಯ ಮಹದೇವನಿಗೆ ೧೨

ದೇಶ ಐವತ್ತಾರಿನ ಜನರುಗಳು
ಕೇಶವಾದ್ಯಮರರೊಲಿದು
ಆ ಶಿವನ ಓಲಗದೊಳು ಜಯವೆಂದು
ಲೇಸಾಗಿ ಸ್ತುತಿಸುತಿಹರು ೧೩

## ೯೦. ಮಂಗಳೆಯರಸಗೆ ಮಂಗಳಂ

ಮಂಗಳೆಯರಸಗೆ ಮಂಗಳಂ ಶಿವ
ಲಿಂಗ ಮಹೇಶಗೆ ಮಂಗಳಂ ॥ ಪಲ್ಲ

ಗಣನೆಗತೀತಗೆ ಗಾನಪ್ರಿಯಗೆ
ಫಣಿಪಕುಂಡಲಗೆ ಪಾವನಶೀಲಗೆ
ಗುಣಮಣಿ ಭೂಷಗೆ ಗೋಪಪತಾಕಗೆ
ಪ್ರಣಮ ಸ್ವರೂಪಗೆ ೧

ಹರಿನುತ ಚರಣಗೆ ಹರಿಣಕಲಾಗ್ರಗೆ
ಕರುಣಸಾಗರಗೆ ಕಾಮವಿದೂರಗೆ
ಮರಣವಿರಹಿತಗೆ ಮದನಸಂಹಾರಗೆ
ತರುಣೇಂದು[illegible]ಲಿಗೆ ೨

ನಿಗಮತ[illegible] ನಿರುತ ಚಿದಂಗಗೆ
ನಗಪ[illegible] ನರಪಾಲಗೆ
ಗಗನ[illegible] ಘನಕುಲರಾಜಗೆ
ಖಗಕೋಟಿ ತೇಜಗೆ ಕಾಂತನಿಗೆ ೩

## ೯೧. ಹರಗಾ[illegible]ರತಿಯೆತ್ತಿರಮ್ಮ

ಪರಮಶ್ರೀ ಶಿವಲಿಂಗದೇ[illegible]ಗ ಶಶಿ
ಧರ ಕಾವಹವಕ್ಕೆ ಆರತಿ[illegible] ॥ಪಲ್ಲ

ಕರಿಚರ್ಮಧರ (ವ್ಯಾಘ್ರಾಸುರರಿಪು) ಮದನಾರಿ
ಉರಗಭೂಷಣ ಉಮೆವಲ್ಲಭಗೆ
ಸುರಮುನಿವಂದ್ಯ ಶ್ರೀವರನೇತ್ರಚರಣಕೆ
ಸರಸಿಜಮುಖಿಯರಾರತಿಯೆತ್ತಿರೆ ೧

ಧರೆ ರಥ ರವಿಶಶಿಗಳು ಗಾಲಿ ಶ್ರುತಿ ವಾಜಿ
ಗಿರಿಧನು ಬ್ರಹ್ಮ ಶರಧಿಯ ಹೂಡಿ
ಉರಗಸಿಂಜಿನಿ ಹರಿಶರದಿ ಮುಪ್ಪುರವ ಸು
ಟ್ಟುರುಹಿದ ದೇವಗಾರತಿಯೆತ್ತಿರೆ ೨

ಭರದ ಚಕ್ರಜಲಂಧರ ಶಿರವರಿದಜ
ಶಿರವಾಮಕರ ನಖದಲಿ ಚಿವುಟಿ
ತರಿದಸುರ ಶಿರಗಳ ರುಂಡಮಾಲೆಯ
ಧರಿಸಿದ ಹರಗಾರತಿಯೆತ್ತಿರಮ್ಮ ೩

ಅಂಧಕನುರನೆದೆಯೊಡೆದುಳಿದಾ
ನಂದದಿಂದ ತ್ರೈಲೋಕ್ಯ ಜಗವ ರಕ್ಷಿಪ ದೇವಗೆ
ಕಂದುಗೊರಳ ಸಿಂಧುಶೇಖರ ತ್ರಿಯಕ್ಷ
ನಂದಿವಾಹನಗಾರತಿಯೆತ್ತಿರಮ್ಮ ೪

ಅಡಿಮುಡಿಗಳ ಹರಿಯಜರಿಗೆ ತೋರದೆ
ಕಡುಪ್ರಿಯದಿಂದೆನ್ನ ಕರಕಂಜದಿ
ಸಡಗರದಲಿ ಮೋಕ್ಷಗೊಂಡು ಸಲಹುವಂತ
ಮೃಡಲಿಂಗದೇವಗೆ ಆರತಿಯೆತ್ತಿರೆ ೫

## ೯೨. ಗಂಗೆ ಪಾರ್ವತಿ ಆರತಿಯೆತ್ತಿರೆ

ಮಂಗಳಾರತಿ ಎತ್ತಿರಮ್ಮ ತು
ರಂಗಕರ ಶಿವಲಿಂಗಗೆ ॥ ಪಲ್ಲ

ನಂದಿತೋರಿದ ಇಂದುವಾಹನ
ಚಂದ್ರಶೇಖರಮೂರ್ತಿಗೆ
ಮಡದಿ ಹಸ್ತವ ನಡುವಿನಲೆ ಮಡಗಿ
ಮಡದಿಯರನೆಲ್ಲ ಸಲಹು ಎ
ನ್ನೊಡೆಯ ಮೃಡ ಕಿಡಿಗಣ್ಣಗೆ ೧

ಗಂಗೆಯನು ಶಿರದೊಳಗೆ ಧರಿಸಿದ
ತುಂಗವೃಷಭ ತುರಂಗಗೆ
ಆರು ವರ್ಣವ ಮೂರು ಮಾಡಿದ
ಸ್ವಾಮಿ ನಿರಾಕಾರಗೆ ೨

ಎನ್ನಂಗದವಗುಣವನು ಹಿಂಗಿಪ ದೇವಗೆ
ಗಂಗೆ ಪಾರ್ವತಿ ಆರತಿಯೆತ್ತಿರೆ ೩

## ೯೩. ಆರತಿ ಬೆಳಗಿದೆನೆ

ಆರತಿ ಬೆಳಗಿದನೆ ನಾನೊಂದಾರತಿ ಬೆಳಗಿದನ
ಮೂರುಕಣ್ಣಯ್ಯಗೆ ಮೂಜಗದೊಡಯಗ ॥ ಪಲ್ಲ

ಹರಿಯಜ ನಮಿತನಿಗೆ ಹರನಿಗೆ ಕರಿಚರ್ಮಾಂಬರಗೆ
ಕರಿಗೊರಳಾತಗ ಕಾಲಸಂಹರನಿಗ ೧

ಗಿರಿಜೆಯ ನಮಿತನಿಗೆ ಪರನಿಗೆ
ಕರಿಚರ್ಮಾಂಬರಗೆ ಕಾಲಸಂಹರನಿಗೆ ೨

ನಂದಿಯನೇರಿದಗೆ ನವಮು
ಕುಂದವನಾಳ್ವವಗೆ ಮಂದರಧರಗೆ ಮದನಸಂಹರಗೆ ೩

ಬಿಸಜನನ ಶಿರವರಿದು ಪಿಡಿದು
ಸಕಲ ಲೋಕದಲಿ ತಿರಿದುಂಬವಗೆ
ಶಶಿಸುರಾರ್ಚಿತಲೋಚನಮೂರ್ತಿಗೆ ಪ್ರಾಣಲಿಂಗೇಶಗೆ ೪

## ೯೪. ಕರ್ಪೂರಾರತಿ

*ರಾಗ: ರೇಗುಪ್ತಿ*

ಕರ್ಪೂರಾರತಿ ಸರ್ಪಭೂಷಣಗೆ ನಾನೆತ್ತುವೆ ॥ ಪಲ್ಲ

ರಾಮ ರಾಮ ಗುಣಸೋಮ ಸೋಮಧರ
ಪ್ರೇಮಾನಂದ ಸುಖಧಾಮ ನಿಶ್ಚಯಗೆ ೧

ಸಂದಾನಂದನ ನಂದನ ಸಂಹಾರನಿಗೆ
ವಂದಿತ ಮಹಿಮ ಪುರಂದರ ಹರಗೆ ೨

ಉನ್ಮನಿಯೊಳು ನಿಜ ತನ್ಮಯಾನಂದಗೆ
ಕಣ್ಮನ ಗೋಚರ ಸನ್ನುತಭವಗೆ ೩

ಪರತರ ಪಾವನಚರಿತ ನಿರಾಮಯ
ಕರಸರಸಿಜವಿಷ್ಟ ಪರಿಪೂರ್ಣನಿಗೆ ೪

ಧರೆಯೊಳು ಕೊಡಗಿನ ಗಿರಿಸಲವಾಸಗೆ
ಹರುಷದಿ ಶಾಂತಮಲ್ಲೇಶ್ವರನಡಿಗೆ ನಾನೆತ್ತುವೆ ೫

## ೯೫. ಮಂಗಳಾರತಿ

ಮಂಗಳಾರತಿ ಬೆಳಗಿರ ಶಿವಗೆ
ಮಂಗಳಾರತಿ ಬೆಳಗಿರ ಹರಗೆ
ಮಂಗಳ ಮಹಿಮೋತ್ತುಂಗಗೆ ಗಿರಿಜಾ
ರ್ಧಾಂಗಗೆ ಕರುಣಾಪಾಂಗಗೆ ಶಿವಗೆ ॥ ಪಲ್ಲ

ಶೇಷ ವಿಭೂಷಗೆ ದೋಷವಿನಾಶಗೆ
ವಾಸವಜನ ಪರಿತೋಷಗೆ........

## ೯೬. ಬೆಳಗಿರೆ ರಾಜಾಂಕಗೆ

ಜಯಮಂಗಳಂ ನಿತ್ಯ ಸದಾ ಶುಭಮಂಗಳಂ ॥ ಪಲ್ಲ

ಇಂದುಶೇಖರನಿಗೆ ಇನಕೋಟಿ ತೇಜನಿಗೆ
(ಮಂದಾಕಿ)ನಿಯ ಪೊತ್ತ ಶ್ರೀಮಹಿಮಗೆ
ನಂದಿವಾಹನನಿಗೆ ನತಜನರ ಪಾಲಿಪಗೆ
ವೃಂದಮುನಿ ಸುರರೊಡೆಯ ಮಾದೇಶಗೆ ೧

ಗುರುಲಿಂಗ ಜಂಗಮ ಗುರುತೆಂದು ತೋರಿದಗೆ
ಪುರಮೂರ ಮೂಲವನು ಹರಿಸಿದವಗೆ
ವರಮಂತ್ರಬೋಧಕಗೆ ಪರಬ್ರಹ್ಮರೂಪನಿಗೆ
ಗಿರಿಮೂರು ಮಧ್ಯ ಸ್ಥಿರವಾಸಗೆ ೨
ರಾಜರಾಜಾಪ್ತನಿಗೆ ಮೂಜಗನ್ನುತನಿಗೆ
ತೇಜನಿಧಿ ನಯನಗೆ ಮೂಜಗ ಹರಗೆ
ರಾಜಪುರವಾಸನಿಗೆ ರಾಜರಾಜೇಶನಿಗೆ
ಪೂಜಿಸುತ ಬೆಳಗಿರೆ ರಾಜಾಂಕಗೆ ೩

## ೯೭. ಎತ್ತಿರೆ ಆರತಿಯ

ಎತ್ತಿರೆ ಆರತಿಯ ಸಖಿಯರು
ಎತ್ತಿರೆ ಆರತಿಯ ಅತ್ತಿತ್ತಗಲದೆ
ಚಿತ್ತಶುದ್ಧದಿ ಘನ ಮುತ್ತೈದೆಯರು
ಚೆಲ್ವ ಮುತ್ತಿನಾರತಿಗಳ ॥ ಪಲ್ಲ

ಕರಿಚರ್ಮಾಂಬರಗೆ
ದುರ್ನರಹರಿ ಸಂಹರಿಪಗೆ
ಕರಿಮುಖ ಷಣ್ಮುಖರು ವೀರಭದ್ರಗೆ
ಗುರುಪಿತನೆನಿಸುವ ಪರಮೇಶ್ವರನಿಗೆ ೧

ಗಂಗೆಯಧರಗೆ ಸರ್ವ
ಮಂಗಳೆಯರಸನಿಗೆ
ಪಿಂಗಲ ಜಟಪಟಲಂಗಳೊಳಗೆ ಬಾಲ
ದಿಂಗಳ ಧರಿಸಿದ ಮಂಗಳ ಮೈಮಗೆ ೨

ಪಾಶವಿಮೋಚನಿಗೆ ಅಖಿಲಾ
ಧೀಶ ಮಹೇಶನಿಗೆ
ದೇಶಕಧಿಕವಾದ ಕಾಶಿಯಕ್ಷೇತ್ರದಿ
ವಾಸ ಶ್ರೀವಿರೂಪಾಕ್ಷೇಶ ಗಣೇಶಗೆ ೩

## ೯೮. ಶಿವಮಂಗಳಂ

ಶಿವ ಮಂಗಳಂ ಶಂಭು ಶುಭಮಂಗಳಂ
ಭುವನಜನಕನಿಗೆ ಭುವನದ ಮಾತೆಗೆ ॥ ಪಲ್ಲ

ತ್ರಿಪುರ ಸಂಹರನಿಗೆ ತ್ರಿಪುರ ಸಂಹರಣೆಗೆ
ಅಪರಿಮಿತ ಮಹಿಮನಿಗೆ ಅಪರಿಮಿತೆಗೆ
ಕಪಟ ಮೃತ್ಯುರಹಿತನಿಗೆ ಕಪಟಪಟು ಪಾರ್ವತಿಗೆ
ಉಪದೇಶಗಮ್ಯನಿಗೆ ಉಪದೇಶಿಗೆ ೧

ಚಂದ್ರಶೇಖರನಿಗೆ ಚಂದ್ರಮುಖಿ ಗಿರಿಜೆಗೆ
ಮಂದ್ರ ನಾದಪ್ರಿಯಗೆ ಮಂದ್ರನಿಧಿಗೆ
ಇಂದ್ರಗಣವಂದಿತಗೆ ಇಂದ್ರಗಣ ಸೇವಿತಗೆ
ಕುಂದ್ರ ನೆಲವಾಸನಿಗೆ ಕುಂದ್ರಸುತಗೆ ೨

ಪರಮಪಾವನನಿಗೆ ಪರಮಗುಣಶೀಲೆಗೆ
ಕರುಣನಿವಾಸನಿಗೆ ಕರುಣಾಂಬೆಗೆ
ಗುರುಬಸವರಾಜನಿಗೆ ಗುರುರೂಪೆಗೌರಿಗೆ ಉಭಯ
ತರ ಚರಿತ್ರರಿಗೆ ಉಭಯತತಿಗೆ ೩

## ೯೯. ದೇವಗನ್ನಿಕೆಯರಾರತಿಯೆತ್ತಿರೆ

ಶ್ರೀ ಸದಾಶಿವಗೆ ಶಂಕರಗೆ ಜಗದೀಶಮ
ಹೇಶಗಾರತಿಯೆತ್ತಿರೆ ॥ ಪಲ್ಲ

ಭಾಗೀರಥಿಯ ಪೊತ್ತಗೆ ಭಾಳನೇತ್ರಗೆ
ಶ್ರೀ ಗೌರಿಯ ಮನೋಹರನಿಗೆ

ನಾಗಭೂಷಣಗೆ ನಾರಾಯಣಪ್ರಿಯಂಗೆ
ನಾಗಕನ್ನಿಕೆಯರಾರತಿಯೆತ್ತಿರೆ ೧

ಕಂಗಳು ಮೂರುಳ್ಳ ಮಂಗಳ ಮಹಿಮಂಗೆ
ಲಿಂಗನು ಘನಗುರುಶಾಂತನಿಗೆ ಎ
ನ್ನಂಗದ ಭವಗಳ ಹಿಂಗಿಪ್ಪ ದೇವಂಗೆ
ಗಂಗೆ ಪಾರ್ವತಿಯರಾರತಿಯೆತ್ತಿರೆ ೨

ಚಂದ್ರಶೇಖರಗೆ ಚಂದ್ರಯ್ಯನ ಪ್ರಿಯಂಗೆ
ಚಂದದಿಂದಲಿ ಮುನಿವಂದಿತಗೆ
ಮಂದರಮಾಲೆಯ ಧರಿಸಿರ್ಪ ದೇವಂಗೆ
ಮಂದಗಮನೆಯರಾರತಿಯೆತ್ತಿರೆ ೩

ಕಾಲಹರನಿಗೆ ಕರ್ಮನಿರ್ಮಳ ರೂಪಂಗೆ
ಬಾಲಚಂದ್ರನ ಸೂಡಿದಭವಂಗೆ
ಬಾಲೆಗೊಲಿದು ನೊರೆವಾಲನು ಸವಿವಂಗೆ
ಭಾವಜಮುಖಿಯರಾರತಿಯೆತ್ತಿರೆ ೪

ನಂಬಿದ ಭಕ್ತರ ಹೊರೆವ ನಿರಾಳಂಗೆ
ನಂಬಿಯಣ್ಣನಿಗೊಲಿದಾತನಿಗೆ
ಕುಂಭಕುಚದಲಿ ನಿಜವ ತೋರಿದ
ಯ್ಯಂಗೆ ಚಂದ್ರಮುಖಿಯರಾರತಿಯೆತ್ತಿರೆ ೫

ಕಪ್ಪುಗೊರಳನಿಗೆ ಸರ್ಪಭೂಷಣನಿಗೆ
ಮುಪ್ಪುರವನು ಗೆಲಿದಾತನಿಗೆ
ಒಪ್ಪುವ ಕಣ್ಣಪ್ಪಗೊಲಿದ ಮಹಾತ್ಮಂಗೆ
ಕರ್ಪುರಗಂಧಿಯರಾರತಿಯೆತ್ತಿರೆ ೬

ಭಾನುಕೋಟಿ ದಿವ್ಯತೇಜ ಪ್ರಕಾಶಂಗೆ
ಆನಂದಮಯಗೆ ಚಿನ್ಮಯಗೆ
ಮಾನಸದೊಳು ನೆನವರ ಕಾಯ್ವದೇವಂಗೆ
ಜ್ಞಾನಾಂಗನೆಯರಾರತಿಯೆತ್ತಿರೆ ೭

ಮದನನಿಂದ್ರಮದಾಗ ನಿಗಮ ನಿಶ್ಚಿಂತಂಗೆ
ಪೊದೆದು ಪುಲಿಯಚರ್ಮವ ಪೊದ್ದಗೆ
ಅಜನದಿಂ ಬ್ರಹ್ಮಕಪಾಲ್ಯವ ಪಿಡಿದಂಗೆ
ಮದಗಜಗಮನೆಯರಾರತಿಯೆತ್ತಿರೆ ೮

ದೇವರ ದೇವಂಗೆ ದೇವಶಿಖಾಮಣಿಗೆ
ದೇವ ಸಮ್ಮೋಹನ ಸ್ವಾಮಿಗೆ
ದೇವ ಪಂಪಾಪತಿ ವಿರುಪಾಕ್ಷದೇವಂಗೆ
ದೇವಗನ್ನಿಕೆಯರಾರತಿಯೆತ್ತಿರ ೯

## ೧೦೦. ಮಂಗಳಂ ಮರುಳಯ್ಯ

ಮಂಗಳಂ ಮರುಳಯ್ಯ ನಂದೀಶ ಭೃಂಗಿಗೆ
ಮಂಗಳಂ ವೀರಭದ್ರಗಣನಾಥಗೆ
ಮಂಗಳಂ ಷಣ್ಮುಖಗೆ ಶ್ರೀ ಗೌರಿ ಗಂಗೆಗೆ
ಮಂಗಳಂ ಬಸವಾದಿ ಪ್ರಮಥರೆಲ್ಲರಿಗೆ ಜಯ
ಮಂಗಳಂ ನಿತ್ಯ ಸದಾ ಶುಭಮಂಗಳಂ ॥ಪಲ್ಲ

ಶ್ರೀ ಗರುವ ಹೇಮಗಿರಿ ಕೇತಾರಲಿಂಗನಿಗೆ
ನಾಗಭೂಷಣ ಕಾಶಿ ವಿಶ್ವೇಶಗೆ
ಭಾಗೀರಥಿಧರ ಹೇಮಕೂಟದ ಹಂಪೆಯ
ಪ್ರೇಮದೊಲ್ಲಭ ಪಂಚಮುಖದಯ್ಯಗೆ
ಜಯಮಂಗಳಂ ನಿತ್ಯಸದಾ ಶುಭಮಂಗಳಂ ೧

ಮಲೆವಶ... ಶೈವ ಮದನಾರಿ ರುದ್ರನಿಗೆ
ಮಲೆವರ ಮರ್ದಿಸುವ ಮಹದೇವಗೆ
ಬಿಲ್ಲುಪಟ್ಟೇಲಿ ನೊಂದ ಭೀಮೇಶಲಿಂಗನಿಗೆ
ಅಲ್ಲಮಪ್ರಭುಸ್ವಾಮಿ ಮಹದೇವಗೆ
ಜಯಮಂಗಳಂ ನಿತ್ಯ ಸದಾ ಶುಭಮಂಗಳಂ ೨

ಮುಪ್ಪುರವ ಗೆಲಿದ ಮುಕ್ಕಣ್ಣಯ್ಯಗೆ
ಅಪ್ಪ ಉಜ್ಜನಿ ಸಿದ್ಧಮರುಳುಸಿದ್ವೇಶ್ವರಗೆ
ಚಿಪ್ಪಗಿರಿ ಭೋಗೇಶ ಚಿದ್ರೂಪಗೆ
ಕಪ್ಪಡಿಯ ಸಂಗಯ್ಯ ಕೊಪ್ಪದ ನಂದೀಶ
ಜಯಮಂಗಳಂ ನಿತ್ಯ ಸದಾ ಶುಭಮಂಗಳಂ ೩

ನಂದ್ಯಾಲ ನವಲನಂದಿ ಮಲವಾಸ ಮಹನಂದಿ
ಚಂದ್ರಶೇಖರ ಚೆಲ್ವ ಲಿಂಗಯ್ಯಗೆ
ಕುಂದಣದ ಗಿರಿವಾಸ ಕೋಟಿ ಪ್ರಕಾಶನಿಗೆ
ಹಿಂದೆ ಮುಂದೆಡಬಲ ಲಿಂಗಯ್ಯಗೆ
ಜಯಮಂಗಳಂ ನಿತ್ಯ ಸದಾ ಶುಭಮಂಗಳಂ ೪

ಶಿವಕಂಚಿ ಕಾಳಸ್ತಿ ಏಕಾಂಬರೇಶ್ವರ
ಭವರೋಗ ವೈದ್ಯ ಭವಕಾಳಸ್ತಿಗೆ

ಭುವನರುಣಾಮಲಯ ಅರುಣಾಚಲೇಶ್ವರಗೆ
ಶಿವದೇವ ಶಂಭುಶಂಕರ ಲಿಂಗಯ್ಯಗೆ
ಜಯಮಂಗಳಂ ನಿತ್ಯ ಸದಾ ಶುಭಮಂಗಳಂ ೫

## ೧೧೧. ಮಂಗಳಂ ಮಹಾಶುಭಮಂಗಳಂ

ಮಂಗಳಂ ಮುನಿಜನ ರಕ್ಷಿಪಂಗೆ ಜಯ
ಮಂಗಳಂ ಮಹಾ ಶುಭಮಂಗಳಂ ॥ ಪಲ್ಲ

ಆರುಚಕ್ರದ ಮೇಲೆ ತೋರುತಿಹ ಗಂಧವನು
ಆರಾಧಿಸುತಿರ್ಪ ಆಚಾರಲಿಂಗಕೆ
ಸಾರಾಯ ಸರಿಗೂಳಿಸಿ ಮಾರಾರಿ ನಿಜತತ್ವ
ಸಾರಿ ಹೇಳುತಲಿರ್ಪ ಗುರುಲಿಂಗಕೆ ೧

ಕರಿದು ಬಿಳಿದೆನಿಸಿ ಕಂಗಳು ಕಳೆಗಳಾ
ವರಿಸಿ ಹಿರಿದಾಗಿ ನೋಡುತಿಹ ಶಿವಲಿಂಗಕೆ
ಉರಸಹಿತ ಮೃದು ಕಠಿಣವರಿದು ರಾಜಿಸಿ ತೋರ್ಪ
ಕರಸ್ಥಲಕೆ ನೆರೆದ ಜಂಗಮಲಿಂಗಕೆ ೨

ಗೀತ ಪಂಚಾಕ್ಷರಿಯ ಸ್ತೋತ್ರ ಮುಖದಲಿ ಕಂಡು
ಭೂತೇಶನಂತಿರ್ಪ ಪ್ರಸಾದಲಿಂಗಕೆ
ನೀತಿ ನಲೆ ನಿಜಗುಣವ ತಾಳಿರ್ದ ಹೃದಯಕ್ಕೆ
ಶ್ವೇತಾಂಗವಾಗಿರ್ದ ಮಹಾಲಿಂಗಕೆ ೩

ಉರವಣಿಸಿಯರಿದು ಮಚ್ಚಾರು ಗುರುಲಿಂಗಕೆ
ಎರಡು ಕೂಡೊಂದಾದವಿಷ್ಟಲಿಂಗಕೆ
ಮೆರವ ಶಿವಲಿಂಗಜಂಗಮವು ಕೂಡೊಂದಾದ
ವರಿದು ರಾಜಿಸಿ ತೋರ್ಪ ಪ್ರಾಣಲಿಂಗಕೆ ೪

ಉಪವನದೊಳು ನಿಂದಿಹ ಪ್ರಸಾದಿಯ ಮಹಾಲಿಂಗಗಳ
ಎರಡು ಕೂಡಿರೆ ಜಯಮಂಗಳಂ ಮಹ ಶುಭಮಂಗಳಂ ೫

## ೧೧೨. ಬೆಳಗಿರಾರತಿ ಕೆಳದಿಯರು

ಬೆಳಗಿರಾರತಿ ಕೆಳದಿಯರು ಶಿವಗ
ಬೆಳಗಿರಾರತಿ ಥಳಥಳಿಸುವ ಚಿದ್ಬೆಳಗಿನ
ಕಳೆಯಿಂದೊಳ ಹೊರಗೆರಡಿಲ್ಲದ ಪರಶಿವಗೆ ॥ ಪಲ್ಲ

ಹರ ಹರಿಣೋದರಧರ ಗಿರಿಜಾಧವ
ಸರಸಿಜಭವಶಿರಪಾತ್ರಗೆ
ಹರಮರುತೋತ್ಪಲ ನಖಿಲೋಚನ
ನರ ಶರದಾಭಯಕರ ಪರಶಿವಗೆ ೧

ಸನಕ ಸನಕ ಸನತ್ಸುನಂದ
ಸನತ್ಸುಜಾತ ಸನ್ಮುನಿಪಸ್ತೋತ್ರ ವಿಪಾತ್ರಗೆ
ವನಧಿಶಯನನ ಘನನಯನಾರ್ಚಿತ ಪದ
ಕನಕ ನಾಗೇಂದ್ರ ಲಯಕಾಲ ಪರಶಿವಗೆ ೨

ಚಿತ್ರ ಚರಿತ್ರ ಪವಿತ್ರ ಗಾತ್ರ ಸ
ನ್ಮಿತ್ರ ಕೋಟಿ ಸಂಕಾಶಗೆ
ಪುತ್ರ ವಿನಾಯಕ ಪುತ್ರ ವಿಜಿತ ಗೋ
ಪುತ್ರವರದ ಮತ್ಪ್ರಭು ಪರಶಿವಗೆ ೩

## ೧೦೩. ಜಯಮಂಗಳಂ

ಜಯಮಂಗಳಂ ನಿತ್ಯ ಶುಭಮಂಗಳಂ ‖ ಪಲ್ಲ

ಮಂಗಳಂ ಮಹದೇವ ಮಹೇಶ ಲಿಂಗನಿಗೆ
ಮಂಗಳಂ ಮನಸಿಜನ ಸಂಹಾರಗೆ
ಮಂಗಳಂ ಮಧುಸುರರ ಮರ್ದಿಸಿದ ದೇವನಿಗೆ
ಮಂಗಳಂ ಮುನಿವಂದ್ಯ ಮುನಿಸೇವ್ಯಗೆ ೧

ಪರಮವಿರಕ್ತನಿಗೆ ಪಾಪಸಂಹಾರನಿಗೆ
ಪರಲೋಕದೊಡೆಯನಿಗೆ ಪರಮೇಶಗೆ
ಪರತರಾನಂದನಿಗೆ ಪಾರ್ವತಿಯ ರಮಣನಿಗೆ
ಪರಕೆ ಪರವಸ್ತುವಿಗೆ ಫಣಿಭೂಷಗೆ ೨

ಕರಿಗೂರಳದೇವನಿಗೆ ಕರುಣರಸಭರಿತನಿಗೆ
ಕರದೊಳಗೆ ಕಮಲಜನ ಶಿರವಿಡಿದ್ಯಯಗೆ
ಕರಿವ್ಯೆರಿಮರ್ದನಗೆ ಕಾಲಸಂಹಾರನಿಗೆ
ಕನಕಾದ್ರಿವಾಸನಿಗೆ ಖಟ್ವಾಂಗಿಗೆ ೩

## ೧೦೪. ಮಾಯದಾರತಿ

ಬೆಳಗುವೆನಾರತಿಯ ಭಾವದಿ ಹೊಳೆವ ಪ್ರಕಾಶಗೆ
ಥಳಥಳಿಸುವ ಹೊರಗೆ ಒಳಗೆ
ದೋರುವ ಕೋಟಿಸೂರ್ಯ ಪ್ರಕಾಶಗೆ ॥ ಪಲ್ಲ

ಕಾಯದ ತಳಿಗೆಯೊಳು ಸದ್ಗುರುವಿಗೆ
ಮಾಯದಾರತಿಯ ಮಾಡಿ
ಸಾಹಸದಿ ಮನತೈಲಜಲದೊಳೆದು ೧

ಪರಿಪರಿಯ ಕಷ್ಟವಳಿದು ಸದ್ಗುರುವಿಗೆ
ನಿರುತ ಭಕ್ತಿಯನೆ ಮಾಡಿ
ಪರಮ ಹರುಷದಿ ಪರಮಾತ್ಮಕನೆಂದು ೨

ಆರು ಏಳು ಮಂದಿ ಹೊರಡಿಸಿ
ಐದು ಮಂದಿ ಗೂಡೆ
ಮೂರು ಮಂದಿ ಬಹುದೂರತನದೊಳಂದು ೩

ಬೆಳಗುವೆ ನಾನಲ್ಲಿ ನವಬಾಗಿಲ ಮುಚ್ಚಿ
ಮಾದೇಶ್ವರಗೆ ಭವದ ಮುಕ್ತಿಗೆ
ತಳಿದು ಅವರಿವರನ್ನದ ಅತಿ ಸೂಕ್ಷ್ಮಿಯೊಳು ೪

ಹಸಯ ಮೇಲ ಕುಳಿತ ಮಾದೇಶ್ವರಗೆ
ಎಸಳು ಹೂವನೆ ಮುಡಿಸಿ
ಪಶುಪತಿ ನೀನೆ ಬೂದಿಬಸವನೆಂದು ೫

## ೧೦೫. ಮಂಗಳ ಕೊಟ್ಟೂರ ಬಸವೇಶಗೆ

ಮಂಗಳಾರತಿಯ ತಂದೆತ್ತಿರೆ ಜಯ
ಮಂಗಳ ಕೊಟ್ಟೂರ ಬಸವೇಶಗ ॥ ಪಲ್ಲ

ರಜತಾದ್ರಿವಾಸಗೆ ಭುಜಗಾಭರಣಗೆ
ಅಜಮಸ್ತಹರಗೆ ತ್ರಿಶೂಲಿಗೆ
ಭಜಕರ ಮನಪ್ರಿಯ ಅಜಗಣ್ಣಗೊಲಿದಗೆ
ಗಜಗಮನೆಯರಾರತಿನೆತ್ತಿರೆ ೧

ಕಾಲಸಂಹರಗೆ ಕಾಲಾತೀತ ಮಹಿಮಗೆ
ಬಾಲಚಂದ್ರಧರ ಪರಶಿವಗೆ
ನೀಲಕಂಧರಗೆ ನಾರಣಪ್ರಿಯಂಗೆ
ನೀಲಾಳಕಿಯರಾರತಿನೆತ್ತಿರೆ ೨

ಮುನಿಜನವಂದ್ಯಗೆ ಮುಪ್ಪುರ ಹರನಿಗೆ
ಮನಸಿಜವ್ವೈರಿ ಮಹದೇವಗೆ
ಅನುದಿನ ನೆನೆವರ ಸಲಹುವ ಸ್ವಾಮಿಗೆ
ಘನಮೂರ್ತಿ ಕೊಟ್ಟೂರ ಬಸವೇಶಗೆ ೩

## ೧೦೬. ಬೆಳಗಿದಳಾರತಿಯ

ಮುದ್ದುಮುಖದ ಮೇಲೆ ತಿದ್ದಿದ ವಿಭೂತಿ
ಕ್ಷುದ್ರದೈವದ ಗಂಡ ರುದ್ರ ನೀ ಬಾರೆಂದು
ಕರೆದಳೆ ತನ್ನ ಮಗನ ಶ್ರೀ ಪಾರ್ವತಿ । ಬೆಳಗಿದಳಾರತಿಯ ॥ ಪಲ್ಲ

ಕಾಲಲಂದಿಗೆ ಗೆಜ್ಜೆ ಧಿಮಿಧಿಮಿಯೆನುತಲಿ
ಚಂದದಿಂದಲಿ ಕುಣಿವೊ ಶರಭ ನೀ ಬಾರೆಂದು ೧

ಕಪ್ಪಿನ ಅಂಗಕೆ ಒಪ್ಪುವ ಕೋರಮೀಸೆ
ಅಪ್ಪ ಮಗನೆ ವೀರಭದ್ರ ನೀ ಬಾರೆಂದು ೨

ಎಡಗೈಲಿ ತ್ರಿಶೂಲ ಬಲಕೈಲಿ ಖಡ್ಗವು
ಸೇರಿದ ದಕ್ಷನ ಕೊಂದ ಶೂಲಿ ನೀ ಬಾರೆಂದು ೩

ದೇಶಕಧಿಕವಾದ ವಾಸ ಶ್ರೀಗಿರಿಕೋಟಿ
ಈಶ ಸರ್ವೇಶ ಪಂಚಲಿಂಗ ನೀ ಬಾರೆಂದು ೪

## ೧೦೭. ಗುರುಬಸವಗಾರತಿಯೆತ್ತಿರೆ

ಜಯಮಂಗಳಂ ನಿತ್ಯ ಶುಭಮಂಗಳಂ
ಲಯಕಾಲ ಕರ್ತೃ ಶ್ರೀ ಗುರುಬಸವಗೆ ॥ ಪಲ್ಲ

ಶ್ರೀವಾಣಿ ಶಚಿ ದಿವ್ಯದೇವಿ ಲೋಪಾಮಯಿ
ಸಾವಿತ್ರಿ ಗಾಯತ್ರಿ ರತಿ ರೋಹಿಣಿ

ದೇವಿ ಅರುಂಧತಿ ಸಹಿತ ದೇವಸ್ತ್ರೀಯರು ಒಲಿದು ೧
ದೇವ ಗುರುಬಸವಗಾರತಿಯೆತ್ತಿರೆ

ಕಮಲಮುಖಿ ಕುಮುದಾಂಬಕಿ ಭ್ರಮರಕುಂತಳಾಂಬಕಿ
ರಮಣಿ ಲಾವಣ್ಯಭೂಷಣಧಾರಿ
ಸಮರಸ ಸಲಕ್ಷಣದ ಸಾತ್ವಿಕದ ಸಖಿಯರು ೨
ವಿಮಲ ಗುರುಬಸವಗಾರತಿಯೆತ್ತಿರೆ
ನಡೆ ಮಂದ ನಡು ಸಣ್ಣ ನುಡಿ ಮೃದುವು
ಮುಡಿ ದಪ್ಪ ಬಡ ಬಾಸೆ ಬಟ್ಟಕುಚ ಬೊಗಸೆಗಣ್ಣು
ಕಡೆದ ಪುತ್ತಳಿಯ ಪೋಲ್ವಡಿ ಮಡದ ೩
ಬೆಡಗಿಯರು ವಿಮಲ ಗುರುಬಸವಗಾರತಿಯೆತ್ತಿರ

ತುರುಬಿನ ಭಾರಕೆ ಕೊರಳು ನಲಿದೊಲೆವುತ
ಗುರುಕುಚದ ಭಾರಕೆ ಬಡನಡುವು ಬಳುಕುತ
ಘನ ಜಘನ ಭಾರಕೆ ತೊಡೆ ನಡುಗುತ ೪
ಬೆಡಗಿಯರು ಜಗದೊಡೆಯ ಗುರುಬಸವಗಾರತಿಯೆತ್ತಿರೆ

ಚೋಳದೇಶದೊಳು ಐವತ್ತಾರು ದೇಶದ
ಮೂರ್ಲೋಕದತಿ ಚೆಲ್ವ ಸಖಿಯರೆಲ್ಲ
ಬಾಲಸಂಗಯ್ಯನಿಗ ಚೀಲಾಳಸ್ವಾಮಿಗೆ ೫
ಲೋಲ ಗುರುಬಸವಗಾರತಿಯೆತ್ತಿರೆ

## ೧೦೮. ಶೃಂಗಾರಮೂರ್ತಿಗೆ

ಶ್ರೀ ಗುರು ಪರಂಜ್ಯೋತಿಶೃಂಗಾರಮೂರ್ತಿಗೆ
ನಾಗಾರಿಗಮನ ನಯನಾರ್ಚಿತನಿಗೆ
ಭೋಗಿಭೂಷಣ ಭೃಂಗಿ ನಾಟ್ಯ ವಿನೋದನಿಗೆ ೧
ಯೋಗಿಗಳ ಹೃನ್ಮಧ್ಯ ನಲೆವಾಸಗೆ ಜಯಮಂಗಳಂ

ಜನನ ಮರಣವ ಗೆಲಿದಾತಗೆ ಶಿವನು
ಅನಂತಮೃಡನು ಗಾನವಿಲೋಲನು
ಘನಮಹಾಮಂತ್ರನು ಭಾನುಕೋಟಿಪ್ರಕಾಶನು ೨
ಶಿವನು ನಂದಿಯೇರಿ ಬಂದನು

## ೧೦೯. ಮಂಗಳಾರತಿಯ ತಂದೆತ್ತಿರೆ

ಮಂಗಳಾರತಿಯ ತಂದತ್ತಿರೆ
ಚಿಕ್ಕದಂಡನಾಯಕ ಚನ್ನಬಸವೇಶಗೆ ॥ ಪಲ್ಲ

ಚೆನ್ನಬಸವೇಶಗೆ ಚಿನ್ಮಯರೂಪಗೆ
ಚೆನ್ನನಾಗಮ್ಮನ ಪುತ್ರನಿಗೆ ೧

ಜಗಕೆಲ್ಲಗುರುವಾದ ಅಗಣಿತ ಮಹಿಮಗೆ
ಸುಗುಣ ಪದ್ಮಿನಿಯರು ಆರತಿಯ ತಂದತ್ತಿರೆ ೨

ಆಚಾರಸಂಪನ್ನ ಅನುಭಾವತೀತಗೆ
ಸಾಕ್ಷಾತ್ ಪರಬ್ರಹ್ಮರೂಪನಿಗೆ ೩

ಜ್ಯೋತಿಪ್ರಕಾಶಗೆ ಉಳುವೆಯ ಭೂಪಗೆ
ಜಾತಿಪದ್ಮಿನಿಯರಾರತಿಯ ತಂದೆತ್ತಿರೆ ೪

ಮಲೆಯ ಮಂಜೀರನಾಡ ಗವಿಯೊಳಗಿರುವಗೆ
ಅಮರಗಣಂಗಳ ಅತಿಪ್ರಿಯಗೆ ೫

ಸಂಗನ ಬಸವನ ಸೋದರದಳಿಯಗೆ
ಮಂಗಳಾತ್ಮಕ ಚೆನ್ನಬಸವೇಶಗೆ ೬

ಮಂಗಳಾರತಿಯ ತಂದೆತ್ತಿರೆ

## ೧೧೦. ಮಂಗಳ ಮಂಗಳ

ಮಂಗಳ ಮಂಗಳ ಜಯಮಂಗಳ ಜಯ
ಮಂಗಳ ಗುರುಚೆನ್ನಬಸವೇಶಗೆ ॥ ಪಲ್ಲ

ಅಕ್ಕ ನಾಗಾಂಬಿಕೆಗೆ ಅಕ್ಕರಯೋಗಿಗೆ
ಮುಕ್ಕಣ್ಣನಮಳ ತದ್ರೂಪಂಗೆ
ಸೊಕ್ಕಿರ್ದ ತಾರಕಾಸುರನ ಮರ್ದಿಸಿದ ವಿ
ರಕ್ತನು ಗುರುಚೆನ್ನಬಸವೇಶಂಗೆ ೧

ಕಾಮವಿದೂರಂಗೆ ಕಾಮವಿನಾಶಂಗೆ
ಆ ಮಹಾಮಹಿಮ ಮಹೇಶಂಗೆ
ಸೋಮಧರನ ಕರುಣದ ಕಾರುಣ್ಯ ನಿ
ಸ್ಸೀಮನು ಗುರುಚೆನ್ನಬಸವೇಶಂಗೆ ೨

ಭಕ್ತರು ಹರಯೆನ್ನಿ ಭಕ್ತರು ಶಿವಯೆನ್ನಿ
ಭಕ್ತರು ಉಘೆಚಾಂಗು ಭಲಯೆನ್ನಿರಿ
ಕರ್ತೃವಲ್ಲಭವಿಷ್ಟಲಿಂಗರಾಜೇಂದ್ರಂಗೆ
ಮುಕ್ತನು ಗುರುಚೆನ್ನಬಸವೇಶಂಗೆ ೩

## ಅನುಬಂಧಗಳು

### ೧. ಅನ್ಯಭಾಷೆಯ ಹಾಡುಗಳು

೧

ಅಟ್ಟತಾಳ

ಜೀವ ಪರಮನೊಳ್ಳೆಕ್ಯ ಸತ್ಯಯಿದು
ಶಿವಶರಣರು ನುಡಿದಂಥ ವಾಕ್ಯ ॥ ಪಲ್ಲ

ಬಹುತು ಹುಷ್ಯಾರ್ ದೇಖನಾ ದೇಖೊ ರಾತ್ಕ ವಖ್ತ್
ಶಿವಪೂಜಾ ಕರ್ನ ರತ್ನನ್ಕುಜರ್ತ ಸೆ ರಖನಾ
ದೇಖೋ ಬಾತ್ಕು ಬಾತ್ಕು ಅಲ್ಲ ಕರ್ಕೊ ತುಂ ಬೋಲ್ನಾ ೧

ತಲಿವಿಕ್ಕರಿಗೊಮ್ಮುಗಾದೂ
ನೀತಲ ವ್ರಾತಕರ್ಮ ಮುಕುಡು ಚೀನ ಪೋದು
ಮಲಭಾಂಡ ದೇಹಾ ಮುನಿಲದೂ
ಯೇ ವ್ಯೇಳಯೇ ಘಡಿಯೊ ಯವ್ವರಿಕಿ ತೆರಿಯದು ೨

ಕಿತನ ದೇಖೊ ಅವತಾರ್ ದೇಖೊ
ಪ್ರಣಮ ಇಚ್ಛಾಶಕ್ತಿ ಪಂಚಾವತಾರ
ಕೈಸೆ ಪಾಡುತ ಪಹಲೆ
ಹರೆಯೇಕೇಕೊ ದೇಖೊ ಘಂಟ ಬಜಾರ ೩

ಎಂಡ ಗುರುಪಾದಂ ನೆಲೆ ನೀ ಮರುಳೆ
ಅಂಡ ಪೇರಿಯಿರಿ ಕಂಗಳ ನಿಂಗುಳ್ಳಗತ್ತ
ಯಂಡಾಡ ಕಲಂದ ಪುಳ್ಳ ನೀತಿ
ತ್ತೂಂಡವಳಿಂಗೊಳಿ ತಲಮ್ಯಾಲೆ ೪

ಮರಣ ನಿಶ್ಚಯವುಯೆಂದಿದ್ದರು ನಮ್ಮ
ಗುರುವು ರಾಮೇಲಿಂಗವ ನಂಬಿದವರು
ತಿರುಗಿ ಜನ್ಮಕೆ ಬಾರರವರು ನಮ್ಮ
ವರ ಕಾಯಪುರಿ ಗಂಗಾಧರನೊಳು ಸೇರು ೫

೨

ಜಯದೇವ ಜಯದೇವ ಜಯವಿಷ್ವಲಿಂಗ
ಆರತಿ ಭುವಳ್ ಭವರ್ತಿ ಭುವಳ್ ಜಯಮಹಲಿಂಗ ॥ ಪಲ್ಲ

ಪುಷ್ಪವತಿ ಪಳೆ ಅನುನಿಸಕಳೆ ಅನುನಿಸಕಳೆ
ಧೂಪದೀಪ ನೈವೇದ್ಯ ಅಮೃತಚಿತ್ಕಳೆ ೧

ಪಂಚತತ್ವ ಚಿ ಪಂಚಾರುತಿ ಕರುಣೆ
ಪಂಚಾರುತಿ ಕರುಣೆ ನಮೆರೂಪೆ ವರ್ನೆ ಚಿತ್ತದುವಲ್ಲೆ ೨

ಕಲ್ಯಾಣಸ್ಥಳೆ ಉತ್ತಮನಗರೆ ಉತ್ತಮನಗರೆ
ಭುಜಕೆಲ್ಲೆ ವೀರಶೈವೆ ಸಾಕ್ಷಾತ್ ಬಸವೇಶ ೩

೩

ಮಂಗಳಮಾಂ ಶುಭನಂದನಿಧೇ ಜಯ
ಮಂಗಳ ಮಮಧರ ಧೀಧರತೇ ॥ ಪಲ್ಲ

ಸೋಮವಿಭೂಷಣ ಕಾಮವಿಶೇಷಣ
ತಾಮರಸಾಕ್ಷಾರ್ಚಿತ ಪದ ತೇ
ಭೀಮನವಾಂಕ ಕುಮಾರ ಜನಕ ಘನ
ಸಾಮಜದೈತ್ಯ ಮದಾಪಹ ತೇ ೧

ಯಮಿಹೃದಯಾಂಬುಜ ಸದನೆಯ
ಯಮನಮದಶಮಿತ ಭವಾರ್ಣ ತಾರಕ ತೇ
ಸುಮನವಂದಿತ ಪಾದಕಮಲಾಸನಂ ಪಂ
ಚಮಸ್ರಿಕ ಪಾತ್ರಿ ಕೃತತೇ ೨

ಶೈಲಶರಾಸನ ನವಬಲಾಧಿಪ ಗುಣ
ಶೂಲಾಯುಧಗದ ಮಹಿಮಾಲಯ ತೇ
ಫಾಲನಯನದಿಕ್ಕಲ ವಂದಿತ ಗುಣ
ಪಾಲಿತ ಮುದ್ವೀರೇಶ್ವರ ತೇ ೩

## ೨. ಆಕರಸೂಚಿ

(ಮೊದಲನೆಯ ಅಂಕಿ ಸ್ವರವಚನದ ಸಂಖ್ಯೆಯನ್ನೂ ಎರಡನೆಯ ಅಂಕಿ ಹಸ್ತಪ್ರತಿ ಸಂಖ್ಯೆಯನ್ನೂ ಸೂಚಿಸುತ್ತದೆ)

೧ - ಕೆ.ಬಿ. ೬೯೭
೨ - ಕೆ.ಬಿ. ೬೯೭
೩ - ಕೆ.ಬಿ. ೬೯೭
೪ - ಕೆ.ಬಿ. ೬೯೭
೫ - ಕೆ.ಬಿ. ೬೯೭
೬ - ಕೆ.ಬಿ. ೬೯೭
೭ - ಕೆ.ಎ. ೪೪೪
೮ - ಕೆ.ಎ. ೪೪೪
೯ - ಕೆ.ಎ. ೪೪೪
೧೦ - ಕೆ.ಎ. ೪೪೪
೧೧ - ಕೆ.ಎ. ೪೪೪
೧೨ - ಕೆ.ಎ. ೪೪೪
೧೩ - ಕೆ.ಎ. ೪೪೪
೧೪ - ಕೆ.ಎ. ೪೪೪
೧೫ - ಕೆ.ಎ. ೪೪೪
೧೬ - ಕೆ.ಎ. ೪೪೪
೧೭ - ಕೆ.ಎ. ೪೪೪
೧೮ - ಕೆ. ೧೧೫೭
೧೯ - ಕೆ. ೧೧೩೧
೨೦ - ಕೆ. ೧೫೩೮
೨೧ - ಕೆ. ೧೭೮೨
೨೨ - ಕೆ.ಬಿ. ೪೨೦
೨೩ - ಕೆ.ಬಿ. ೬೯೭
೨೪ - ಕೆ.ಬಿ. ೫೪೫
೨೫ - ಕೆ.ಬಿ. ೫೪೫
೨೬ - ಕೆ.ಬಿ. ೫೪೫
೨೭ - ಕೆ.ಬಿ. ೫೪೫
೨೮ - ಕೆ.ಬಿ. ೫೩೮
೨೯ - ಕೆ.ಬಿ. ೫೩೮
೩೦ - ಕೆ. ೧೫೩೮
೩೧ - ಕೆ.ಬಿ. ೪೧೭
೩೨ - ಕೆ.ಬಿ. ೪೧೭
೩೩ - ಕೆ.ಬಿ. ೪೧೭
೩೪ - ಕೆ.ಬಿ. ೪೧೭
೩೫ - ಕೆ.ಬಿ. ೪೧೭
೩೬ - ಕೆ.ಬಿ. ೪೨೦
೩೭ - ಕೆ.ಬಿ. ೪೨೦
೩೮ - ಕೆ.ಬಿ. ೪೨೦
೩೯ - ಕೆ.ಬಿ. ೪೨೦
೪೦ - ಕೆ. ೧೧೮೨
೪೧ - ಕೆ. ೧೦೧೨
೪೨ - ಕೆ.ಬಿ. ೪೨೦
೪೩ - ಕೆ.ಬಿ. ೪೨೦
೪೪ - ಕೆ.ಬಿ. ೪೨೦
೪೫ - ಕೆ.ಬಿ. ೪೨೦
೪೬ - ಕೆ.ಬಿ. ೪೨೦
೪೭ - ಕೆ.ಬಿ. ೬೯೭
೪೮ - ಕೆ. ೯೩೭
೪೯ - ಕೆ.ಬಿ. ೩೩೨
೫೦ - ಕೆ. ೧೭೮೨
೫೧ - ಕೆ. ೧೭೮೨
೫೨ - ಕೆ. ೧೭೮೨
೫೩ - ಕೆ. ೧೭೮೨
೫೪ - ಕೆ.ಬಿ. ೬೯೭
೫೫ - ಕೆ. ೧೭೯
೫೬ - ಕೆ. ೧೭೨.
೫೭ - ಕೆ. ೧೭೮೨
೫೮ - ಕೆ.ಬಿ. ೬೯೯
೫೯ - ಕೆ. ೧೭೮೨
೬೦ - ಕೆ.ಬಿ. ೬೯೯
೬೧ - ಕೆ. ೧೩೧
೬೨ - ಕೆ.ಬಿ. ೬೯೯

೬೩ – ಕೆ. ೧೧೩೧
೬೪ – ಕೆ.ಬಿ. ೬೯೯
೬೫ – ಕೆ.ಬಿ. ೬೯೯
೬೬ – ಕೆ. ೧೭೬೩
೬೭ – ಕೆ.ಬಿ. ೬೯೭
೬೮ – ಕೆ.ಬಿ. ೬೯೭
೬೯ – ಕೆ.ಬಿ. ೬೯೭
೭೦ – ಕೆ. ೯೩೭
೭೧ – ಕೆ. ೧೧೨೬
೭೨ – ಕೆ. ೯೩೭
೭೩ – ಕೆ.ಬಿ. ೬೯೯
೭೪ – ಕೆ. ೯೯೪
೭೫ – ಕೆ. ೯೩೭
೭೬ – ಕೆ. ೧೧೩೧
೭೭ – ಕೆ. ೧೨೭೯
೭೮ – ಕೆ. ೧೧೮೨
೭೯ – ಕೆ.ಬಿ. ೬೯೯
೮೦ – ಕೆ.ಎ. ೫೧೪
೮೧ – ಕೆ.ಬಿ. ೬೯೯
೮೨ – ಕೆ. ೧೧೯೨
೮೩ – ಕೆ. ೧೮೦೪
೮೪ – ಕೆ. ೧೮೦೪
೮೫ – ಕೆ. ೧೮೦೪
೮೬ – ಕೆ.ಬಿ. ೩೩೨
೮೭ – ಕೆ. ೧೮೦೪
೮೮ – ಕೆ. ೧೭೬೩
೮೯ – ಕೆ. ೧೭೬೩
೯೦ – ಕೆ. ೯೩೭
೯೧ – ಕೆ. ೧೧೮೨
೯೨ – ಕೆ. ೧೭೮೨
೯೩ – ಕೆ. ೧೭೮೨
೯೪ – ಕೆ. ೧೭೮೨
೯೫ – ಕೆ. ೧೭೮೨
೯೬ – ಕೆ. ೧೭೮೨
೯೭ – ಕೆ. ೧೭೮೨
೯೮ – ಕೆ. ೧೧೨೬
೯೯ – ಕೆ. ೧೧೨೬
೧೦೦ – ಕೆ.೧೭೮೨
೧೦೧ – ಕೆ. ೧೧೨೬
೧೦೨ – ಕೆ. ೧೭೮೨
೧೦೩ – ಕೆ. ೧೭೮೨
೧೦೪ – ಕೆ. ೧೭೬೩
೧೦೫ – ಕೆ. ೧೧೯೨
೧೦೬ – ಕೆ. ೧೭೮೨
೧೦೭ – ಕೆ. ೧೭೮೨
೧೦೮ – ಕೆ. ೧೭೮೨
೧೦೯ – ಕೆ. ೧೭೮೨
೧೧೦ – ಕೆ. ೧೭೮೨

ಅನುಬಂಧ

೧ – ಕೆ.ಬಿ. ೫೪೫
೨ – ಕೆ.ಬಿ. ೬೯೯
೩ – ಕೆ. ೧೭೮೨

## ೩. ಅಂಕಿತಸೂಚಿ

## ೪. ಪಲ್ಲವಿಗಳ ಅಕಾರಾದಿ

# ಸಮಗ್ರ ಸ್ವರವಚನ ಪ್ರಕಟನ ಯೋಜನೆ

ಅನುಭಾವದ ವಾಚನಪಾತಳಿಗಾಗಿ ಬರೆದ "ವಚನ ಸಾಹಿತ್ಯ" ದಂತೆ, ಶ್ರವಣಪಾತಳಿಗಾಗಿ ಬರೆದ "ಸ್ವರವಚನ ಸಾಹಿತ್ಯ"ವು ಕನ್ನಡಕ್ಕೆ ವೀರಶೈವರು ನೀಡಿದ ಅಪೂರ್ವ ಕೊಡುಗೆಯೆನಿಸಿದೆ. ಗುಣ-ಗಾತ್ರ ದೃಷ್ಟಿಯಿಂದ ಗಣ್ಯವೆನಿಸಿರುವ ಈ ಸಾಹಿತ್ಯದ ಸಮಗ್ರ ಪ್ರಕಟನ ಯೋಜನೆಯನ್ನು "ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ" ಮೂಲಕ ಕೈಗೆತ್ತಿಕೊಂಡಿದ್ದು, ಈವರೆಗೆ ಬೆಳಕು ಕಂಡ ಸಂಪುಟಗಳು ಹೀಗಿವೆ :

**ಒಂದನೆಯ ಕಂತು : ೧೯೯೫**

ಸ್ವರವಚನ ಸಾಹಿತ್ಯ ಸಂಪುಟ ೧
—ಎಸ್. ಶಿವಣ್ಣ

ಸ್ವರವಚನ ಸಾಹಿತ್ಯ ಸಂಪುಟ ೨
—ಎಸ್. ಶಿವಣ್ಣ

ಸ್ವರವಚನ ಸಾಹಿತ್ಯ ಸಂಪುಟ ೩
—ಜಿ. ಜಿ. ಮಂಜುನಾಥ್

ಸ್ವರವಚನ ಸಾಹಿತ್ಯ ಸಂಪುಟ ೪
ವೈ. ಸಿ. ಭಾನುಮತಿ

ಸ್ವರವಚನ ಸಾಹಿತ್ಯ ಸಂಪುಟ ೫
—ಕೆ. ಆರ್. ಶೇಷಗಿರಿ

**ಎರಡನೆಯ ಕಂತು : ೧೯೯೭**

ಸ್ವರವಚನ ಸಾಹಿತ್ಯ ಸಂಪುಟ ೬
—ಎಸ್. ಎಂ. ಹಿರೇಮಠ

ಸ್ವರವಚನ ಸಾಹಿತ್ಯ ಸಂಪುಟ ೭
—ಶಿವರಾಜ ಎಂ. ದೇವಪ್ಪ

ಸ್ವರವಚನ ಸಾಹಿತ್ಯ ಸಂಪುಟ ೮
—ಬಿ. ವಿ. ಮಲ್ಲಾಪುರ

ಸ್ವರವಚನ ಸಾಹಿತ್ಯ ಸಂಪುಟ ೯
—ವೀರಣ್ಣ ರಾಜೂರ

ಸ್ವರವಚನ ಸಾಹಿತ್ಯ ಸಂಪುಟ ೧೦
—ವೈ. ಸಿ. ಭಾನುಮತಿ

---

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು